# ಶೂದ್ರ

ಬೆಲೆ: ರೂ. 2



ಈ ಸಂಚಿಕೆಯಲ್ಲಿ

ರಾಜೇಂದ್ರ ಚೆನ್ನಿ—ಡಾ॥ ಅನುಪಮಾ ನಿರಂಜನ—ಬಂದಗದ್ದೆ ರಾಧಾಕೃಷ್ಣ—ಸತೀಶ ಕುಲಕರ್ಣಿ—ಜಿ. ವಿ. ಆನಂದಮೂರ್ತಿ—ಎಸ್. ನಟರಾಜ್—ಎಲ್. ಎಸ್. ಗೋಪಾಲಕೃಷ್ಣ—ಎಂ. ಎಸ್. ವ್ಯಾಸರಾವ್—ಸುಮತೀಂದ್ರ ನಾಡಿಗ್—ರಮಜಾನ್ ದರ್ಗಾ—ಮೂ. ಮ. ಕರಾಳೆ—ರವೀಂದ್ರ ಭಟ್—ಸುದ್ದಿಯ ಗುದ್ದಾಟ.

'ಮುಕ್ತ' ಚರ್ಚೆಗಾಗಿ 'ಶೂದ್ರ' ತಿಂಗಳ ಪತ್ರಿಕೆ

ಸಂಚಿಕೆ : 3-4 ಡಿಸೆಂಬರ್-ಜನವರಿ 1986 ಸಂಪುಟ : 11

ಸಹಾಯಕ ಸಂಪಾದಕರು : ನಿರ್ಮಲಾರೆಡ್ಡಿ—ಆನಂದಮೂರ್ತಿ—ಮಹೇಶ್

ಮುಖಪುಟದ ಕಲಾವಿದರು : ವಿ. ಜಿ. ಅಂದಾನಿ (ಸಮಾಧಿ)

ಹಿಂಬದಿ ಪುಟದ ಕಲಾವಿದರು : ಕುಮಾರ್ ಪ. ಸ. (ಮಾಂಸ ಖಂಡ)

ಮುಂದಿನ ಸಂಚಿಕೆಯಲ್ಲಿ : ಉಡುಪಿ ರಮೇಶ್‌ರಾವ್‌ರವರ ಚಿತ್ರ.

ಶೂದ್ರ ಬರದಿದ್ದರೆ ಪತ್ರ ಬರೆಯಿರಿ. ಚಂದಾಕಳಿಸಿ. ಆಜೀವ ಸದಸ್ಯರಾಗಿ ಲೇಖನವನ್ನು ಕಳಿಸುವಾಗ ಹದಿನೈದು ಪೈಸೆಯ ರಿಪ್ಲೈ ಕಾರ್ಡಿಡಿ. ಚಂದಾವನ್ನು ಚೆಕ್ ಮೂಲಕ ಕಳಿಸುವವರು ಎರಡು ರೂಪಾಯಿ ಹೆಚ್ಚುವರಿ ತುಂಬ ಬೇಕಾಗಿ ವಿನಂತಿ.

ವಾರ್ಷಿಕ ಚಂದಾ : 22 ರೂ.

ಆಜೀವ ಚಂದಾ : 250 ರೂ. (ಐದು ಕಂತುಗಳಲ್ಲಿ)

ಶೂದ್ರ ಶ್ರೀನಿವಾಸ್, ಸುದ್ದುಗುಂಟೇಪಾಳ್ಯ, ಡಿ. ಆರ್. ಕಾಲೇಜು ಅಂಚೆ,
ಬೆಂಗಳೂರು-560 029

ಒಂದು ಸೂಚನೆ :

'ಶೂದ್ರ' ಸಮಾಜವಾದಿ ನಾಯಕರಾಗಿದ್ದ ದಿ|| ಶಾಂತವೇರಿ ಗೋಪಾಲಗೌಡ ಹಾಗೂ ದಿ|| ಎಸ್. ವೆಂಕಟರಾಂರವರ 'ನೆನಪಿನ ವೇದಿಕೆ'ಯಿಂದ ಪ್ರತಿ ವರ್ಷ ಪ್ರಬಂಧ ಸ್ಪರ್ಧೆಯನ್ನು ಏರ್ಪಡಿಸಲು ಬಯಸಿದೆ. ಅವನ್ನು ಈ ವರ್ಷದಿಂದಲೇ ಪ್ರಾರಂಭಿಸಲಾಗುವುದು. ಒಟ್ಟು ಎರಡು ಬಹುಮಾನಗಳು. ತಲಾ ಮುನ್ನೂರು ರೂಪಾಯಿಯಂತೆ. ಪ್ರಬಂಧದ ವಿಷಯಗಳು : 1) ಗಾಂಧಿ ನಂತರದ ರಾಜಕೀಯ 2) ಭಾರತದಲ್ಲಿ ಕಮ್ಯುನಿಸ್ಟ್ ಚಳುವಳಿಯ ಸೋಲು ಗೆಲುವುಗಳು. ಪ್ರಬಂಧ ಕಳಿಸಲು ಕೊನೆಯ ದಿನಾಂಕ : ಏಪ್ರಿಲ್, ಒಂದು. 1986. ಪುಟಗಳು ಫುಲ್‌ಸ್ಕೇಪ್‌ನಲ್ಲಿ 15 ರಿಂದ 20 ರೊಳಗಿರಬೇಕು. ಒಂದೇ ಮಗ್ಗುಲಲ್ಲಿ ನೀಟಾಗಿ ಬರೆದಿರಬೇಕು.

ಸಂ.

# ತೇಜಸ್ವಿಯವರ 'ಚಿದಂಬರ ರಹಸ್ಯ'

—ರಾಜೇಂದ್ರ ಚೆನ್ನಿ

ತೇಜಸ್ವಿಯವರ ಕೃತಿಗಳ ಕೇಂದ್ರವಾಗಿರುವುದು ನಿಗೂಢ. 'ಸ್ವರೂಪ' ವ್ಯಕ್ತಿತ್ವದ ಮೇಲು ಪದರುಗಳನ್ನು ಕಳಚುತ್ತ ಹೋದಂತೆ ಗೋಚರವಾಗುವ ಮತ್ತು ಮನುಷ್ಯರ ಸ್ವಭಾವದ ಮೂಲದಲ್ಲಿಯೇ ಇರುವ ಶೂನ್ಯವನ್ನು, ಪಾಪಪ್ರಜ್ಞೆಯನ್ನು ಶೋಧಿಸುತ್ತದೆ. **"ನಿಗೂಢ ಮನುಷ್ಯರು"** ಇಂಥದೇ ಶೋಧವನ್ನು ಎರಡು ರೀತಿಯಲ್ಲಿ ಮಾಡುತ್ತದೆ. ಒಂದು ಕಡೆಗೆ ಎಲ್ಲ ಅನುಭವವನ್ನು ಪಡೆದುಕೊಳ್ಳಬೇಕು ಎನ್ನುವ ತವಕದಲ್ಲಿರುವ ಜಗನ್ನಾಥನಿದ್ದರೆ, ಇದೇ ಪ್ರಯತ್ನದಲ್ಲಿ ತನ್ನ ವ್ಯಕ್ತಿತ್ವ 'ವಿದಳನ'ವಾಗುತ್ತ ಹೋದದ್ದನ್ನು ಕಾಣುವ ಮತ್ತು ಬೇರೆ ಬೇರೆ ವ್ಯಕ್ತಿಗಳನ್ನು ತೊಟ್ಟುಕೊಂಡು ಕೊನೆಗೆ ಅವೆಲ್ಲವಗಳನ್ನು ಕಳಚಿಕೊಂಡು ಅಸ್ತಿತ್ವದ ಅರ್ಥಹೀನತೆಯನ್ನು ಒಪ್ಪಿಕೊಳ್ಳುವ ಗೋಪಾಲಯ್ಯ ಇನ್ನೊಂದು ಕಡೆಗಿದ್ದಾನೆ. ಈ ಎರಡೂ ಕೃತಿಯ ಕೇಂದ್ರವಾದ ನಿಗೂಢ ಒಂದು ರೀತಿಯಲ್ಲಿ ನೇತ್ಯಾತ್ಮಕವಾಗಿ ಕೆಲಸ ಮಾಡುತ್ತದೆ. ಈರುಳ್ಳಿಯ ಸಿಪ್ಪೆಗಳನ್ನು ಸುಲಿಯುತ್ತಾ ಹೋದಂತೆ ಮನುಷ್ಯ ಸುಲಭವಾಗಿ ನಂಬಿಬಿಡುವ ವ್ಯಕ್ತಿತ್ವದ ಪದರುಗಳನ್ನು ಕಳಚುತ್ತಾ ಹೋದಾಗ ಕೊನೆಗೆ ಉಳಿಯುವುದು ಅಸ್ತಿತ್ವದ ದಿಗಿಲು ಹುಟ್ಟಿಸುವಂಥ ಸ್ಥಿತಿಗಳು. **'ಕರ್ವಾಲೋ'** ಕಾದಂಬರಿಯ ಕೇಂದ್ರವಾಗಿರುವುದು ಸೃಷ್ಟಿಯ ನಿಗೂಢವೊಂದನ್ನು ತನ್ನಲ್ಲಿ ಹುದುಗಿಸಿಕೊಂಡ ಹಾರುವ ಓಲಿಯ ಶೋಧ. ಇನ್ನೊಂದು ರೀತಿಯಲ್ಲಿ ಇದು ಸೃಷ್ಟಿಯ ಅಗಮ್ಯತೆಯ ಶೋಧವೂ ಆಗಿದೆ. ಈ ಸವಾಲನ್ನು ಎದುರಿಸುವ ಎಲ್ಲ ಪಾತ್ರಗಳೂ ತಮ್ಮಲ್ಲಿ ಸುಪ್ತವಾಗಿರುವ ಮತ್ತು ಭ್ರಷ್ಟ ಸಮಾಜ ಅದುಮಿ ಬಿಡುವ ಸುಪ್ತ ಪ್ರತಿಭೆಯನ್ನು ಕಂಡುಕೊಳ್ಳುತ್ತಾರೆ. ಹೀಗಾಗಿ ಇಲ್ಲಿ ನಿಗೂಢ ಶೋಧ ಸೃಷ್ಟಿಯ ಅಗಮ್ಯತೆಯ ಜತೆಗೆ ಮನುಷ್ಯನ ಪ್ರತಿಭೆಯ ಅದಮ್ಯತೆಯನ್ನು ಹೊಮ್ಮಿಸುತ್ತದೆ. ಕರ್ವಾಲೋ ಕಾದಂಬರಿಯ ಮೌಲಿಕ ಗುಣವೆಂದರೆ ಸೃಷ್ಟಿಯ ಅಗಮ್ಯತೆಯ ಎದುರು ಬಿಚ್ಚಿಕೊಳ್ಳುವ ಮನುಷ್ಯನ ಸಾಧ್ಯತೆಗಳ ಜತೆಗೆ ಈ ಸಾಧ್ಯತೆಗಳನ್ನು ನಾಶ ಮಾಡುವ ಸಮಾಜವೂ ಸೂಚ್ಯವಾಗಿ ಈ ಕಾದಂಬರಿಯ ಚೌಕಟ್ಟಿನಲ್ಲಿರುವುದು. ನಿಗೂಢ ತೇಜಸ್ವಿಯವರ ಕೃತಿಗಳ ವಸ್ತು ಮಾತ್ರವಾಗಿರದೆ ಅವನು ಬದುಕಿನಲ್ಲಿ ಕಾಣುವ ಒಂದು ಮೌಲ್ಯವೂ ಆಗಿದೆ. ಆದ್ದರಿಂದ ಅದು ಆವರ ಅನುಭವ-

---

ರಾಜೇಂದ್ರ ಚೆನ್ನಿ, ರಂಗನಾಥ ಬಿಲ್ಡಿಂಗ್, ವಿದ್ಯಾನಗರ, ಎರಡನೆಕ್ರಾಸ್, ಶಿವಮೊಗ್ಗ

ವನ್ನು ಅರ್ಥ ಮಾಡಿಕೊಳ್ಳುವ ಬಗೆಯನ್ನು ಮಾತ್ರವಲ್ಲದೆ ಅವರ ಕೃತಿಗಳ ಬಂಧವನ್ನು ನಿಯಂತ್ರಿಸುತ್ತದೆ. ಹೀಗಾಗಿ ನಿಗೂಢದ ಶೋಧವೇ ಮುಖ್ಯವಾಗಿರುವ 'ಪತ್ತೆದಾರಿ' ಅಂಶ ಅವರ ಕೃತಿಗಳ ಬಂಧದಲ್ಲಿ ಕಂಡು ಬರುತ್ತದೆ. ಜತೆಗೆ ತೇಜಸ್ವಿಯವರ ಕೃತಿಗಳಲ್ಲಿ ಕಾಣುವ ಅನನ್ಯವಾದ ಲವಲವಿಕೆ ಮತ್ತು ಹಾಸ್ಯ ಪ್ರಜ್ಞೆ ಕೂಡ ನಿಗೂಢಕ್ಕೆ ಸಂಬಂಧಿಸಿದ್ದು. ತೇಜಸ್ವಿ ಬದುಕಿನಲ್ಲಿರುವ ನಿಗೂಢದ ಅಂಶವನ್ನು ಒಪ್ಪಿಕೊಂಡು ಬರೆಯುವುದರಿಂದಲೇ ಸೃಷ್ಟಿಯ ಬಗ್ಗೆ ಮತ್ತು ಮನುಷ್ಯನ ನಡುವಳಿಕೆಯ ಬಗ್ಗೆ ತಮ್ಮ ವಿಸ್ಮಯವನ್ನು ಮತ್ತು ಅದರಿಂದ ಹುಟ್ಟುವ ಲವಲವಿಕೆಯನ್ನು ಜೀವಂತವಾಗಿರಿಸಿಕೊಂಡು ಬರೆಯುತ್ತಾರೆ.

ಸಮಗ್ರತೆ ತೇಜಸ್ವಿಯವರ ಚಿಂತನೆಯ ಮೌಲಿಕ ಗುಣವಾಗಿದೆ. ಸೃಷ್ಟಿ ಪರಿಸರ, ಸಮಾಜ ಮತ್ತು ವ್ಯಕ್ತಿ–ಇವೆಲ್ಲವುಗಳನ್ನು ಮತ್ತು ಅವುಗಳ ಪರಸ್ಪರ ಸಂಬಂಧವನ್ನು ಒಟ್ಟಿಗೆ ಗ್ರಹಿಸಬಲ್ಲ ಜೀವನದೃಷ್ಟಿ ಅವರಿಗಿದೆ. ಪ್ರಬುದ್ಧ ಬರಹಗಾರನಲ್ಲಿ ಇರಬೇಕಾದ ಇಂಥ ಸಂಯೋಜಿತ ಜೀವನ ದೃಷ್ಟಿಯ ಕೊರತೆಯೆ ನಮ್ಮ ಇತ್ತೀಚಿನ ಸಾಹಿತ್ಯದಲ್ಲಿ ಎದ್ದು ಕಾಣುತ್ತದೆ. ಸಾಹಿತ್ಯ ಅನುಭವ ಶೋಧನೆಯ ಒಂದು ಮಾಧ್ಯಮ ಎನ್ನುವುದನ್ನು ಒಪ್ಪುವುದಾದರೆ ಇಂಥ ಜೀವನ ದೃಷ್ಟಿಯಿಲ್ಲದ ಸಾಹಿತ್ಯ ದ್ವಿತೀಯ ದರ್ಜೆಯದು ಎಂದು ಹೇಳಬೇಕಾಗುತ್ತದೆ. ಸಂಯೋಜಿತ ಜೀವನದೃಷ್ಟಿ ಕೇವಲ ತಾತ್ವಿಕ ತಿಳುವಳಿಕೆಗೆ ಸಂಬಂಧಿಸಿದ್ದಲ್ಲ. ಕೃತಿಯಲ್ಲಿ ಅನುಭವವನ್ನು ಪುನಃ ಸೃಷ್ಟಿ ಮಾಡುವ ಕೆಲಸದಲ್ಲಿ ತೊಡಗುವ ಸೃಷ್ಟಿಶೀಲ ಚಿಂತನೆಗೆ ಸಂಬಂಧಿಸಿದ್ದು. ಬರಹಗಾರ ತನಗೆ ದಕ್ಕಿದ ಅನುಭವವನ್ನು ಹಿಡಿದುಕೊಡುವುದರ ಜತೆಗೆ ಆ ಅನುಭವವನ್ನು ಸಂಯೋಜಿತವಾಗಿ ಒಂದು ಜೀವನ ದೃಷ್ಟಿಯ ಚೌಕಟ್ಟಿನಲ್ಲಿಟ್ಟು ನೋಡಿದರೆ ಅದಕ್ಕೆ ಹೆಚ್ಚಿನ ಅರ್ಥ ವಿನ್ಯಾಸ ಸಿಗುತ್ತದೆ. ತೇಜಸ್ವಿಯವರ ಸೃಷ್ಟಿಶೀಲ ಚಿಂತನೆಯ ಸತ್ವವಿರುವುದು ಮನುಷ್ಯ ಮತ್ತು ಅವನ ಪರಿಸರವನ್ನು ಅವುಗಳ ಅನಿವಾರ್ಯವಾದ ಸಂಬಂಧದ ಹಿನ್ನೆಲೆಯಲ್ಲಿ ನೋಡುವುದರಲ್ಲಿ. ಮನುಷ್ಯನ ಸ್ವಭಾವ, ಅವನ ನಡುವಳಿಕೆ ಮತ್ತು ಮೌಲ್ಯಗಳ ಜಗತ್ತು ಹಾಗೂ ಅವನ ಸುತ್ತಲಿನ ಜೀವಂತ ಪರಿಸರ–ಇವೆರಡೂ ಅವರ ದೃಷ್ಟಿಯಲ್ಲಿ ಎಷ್ಟರ ಮಟ್ಟಿಗೆ ಹೆಣೆದುಕೊಂಡಿವೆಯೆಂದರೆ ಅವು ಒಂದು ನಿರಂತರವಾದ ಪ್ರತಿಕ್ರಿಯೆಯ ಎರಡು ಮುಖಗಳಾಗಿ ಕಾಣುತ್ತವೆ. ಈ ಪರಿಸರ ಅದಮ್ಯವಾದ ಚೈತನ್ಯವುಳ್ಳ ಮತ್ತು ತನ್ನದೇ ಆದ ನಿಯಮಗಳಿಗೆ ಬದ್ಧವಾಗಿ ಸದಾ ವಿಕಸನ ಹೊಂದುತ್ತಿರುವ ನಿಸರ್ಗ ಮಾತ್ರವಲ್ಲ, ಈ ನಿಸರ್ಗದ ಮೇಲೆ ಗಾಢವಾಗಿ ಪರಿಣಾಮ ಬೀರುತ್ತಿರುವ ಅವನು ನಿರ್ಮಿಸಿದ ಸಮಾಜದ ಪರಿಸರವೂ ಅಹುದು. ಸಾಮಾಜಿಕ ಪರಿಸರದ ಬಗ್ಗೆ ತೀವ್ರವಾದ ನೈತಿಕ ಕಾಳಜಿ ತೋರಿಸುವ ಅವರು ನಿಸರ್ಗದ ಪರಿಸರದ ಬಗ್ಗೆ ಅಷ್ಟೇ ಆಳವಾದ ಕುತೂಹಲವನ್ನು ತೋರಿಸುತ್ತಾರೆ ಏಕೆಂದರೆ ಅವರ ದೃಷ್ಟಿಯಲ್ಲಿ ಇವೆರಡೂ ಮನುಷ್ಯನ ಬದುಕಿನಲ್ಲಿ ಮತ್ತು ಅವನ

ಪ್ರಜ್ಞೆಯಲ್ಲಿ ಬಿಡಿಸಲಾಗದಂತೆ ಹೆಣೆದುಕೊಂಡಿವೆ. ಮನುಷ್ಯ ಮತ್ತು ಅವನ ಪರಿಸರದ ಸಂಬಂಧಗಳನ್ನು ಶೋಧಿಸುವ ಕೆಲಸದಲ್ಲಿ ಅವರು ವೈಜ್ಞಾನಿಕ ಚಿಂತನೆಯ ಒಳನೋಟಗಳನ್ನು ತಮ್ಮ ಚಿಂತನೆಯಲ್ಲಿ ಮೇಳವಿಸಿಕೊಂಡಿದ್ದಾರೆ. ಬಹುಶಃ ಕಾರಂತರನ್ನು ಬಿಟ್ಟರೆ ಕನ್ನಡದಲ್ಲಿ ಇಂಥ ಚಿಂತನೆಯನ್ನು ತೇಜಸ್ವಿಯವರಲ್ಲಿ ಮಾತ್ರ ಕಾಣುತ್ತೇವೆ. ಆದ್ದರಿಂದಲೇ 'ಸಾರ್ವಜನಿಕ' 'ಚಿರಂತನ' ಸಮಸ್ಯೆಗಳ ಸೆರಗು ಹಿಡಿಯಲು ತಿಣುಕುವ ಇತರ ಬರಹಗಾರರಿಗಿಂತ ತೇಜಸ್ವಿ ಸಾಂಸ್ಕೃತಿಕವಾಗಿ ಹೆಚ್ಚು ಮಹತ್ವಪೂರ್ಣರು. ಅವರ ಕೃತಿಗಳು ತೀವ್ರವಾದ ತಾತ್ವಿಕ ಚಿಂತನೆಯ ಜತೆಗೆ ಸಮಕಾಲೀನತೆಯ ಸೊಗಡನ್ನು ಪಡೆದಿವೆ. ನಮ್ಮ ಸುತ್ತಲಿನ ಬದುಕಿನ ಮೇಲೆ ದೃಷ್ಟಿ ಕುದುರಿಸಿ ಬರೆಯುವ ಯಾರಿಗಾದರೂ ಮನುಷ್ಯ ಮತ್ತು ಅವನ ಪರಿಸರದ ಸಂಬಂಧ ನಮ್ಮ ಇಂದಿನ ಜೀವನದ ಅತ್ಯಂತ ಮುಖ್ಯ ಸಮಸ್ಯೆಯಾಗಿ ಕಂಡು ಬರುತ್ತದೆ. ಇದು ಕೇವಲ ಸಂಪಾದಕೀಯ ಟಿಪ್ಪಣಿಗಳಿಗೆ, ವಿಚಾರ ಸಂಕಿರಣಗಳಿಗೆ ಸೀಮಿತವಾಗಬೇಕಾದ ವಿಷಯವಲ್ಲ. ಸಾವಿರಾರು ವರ್ಷಗಳಿಂದ ರೋಗಗ್ರಸ್ತವಾದ ನಮ್ಮ ಚಿಂತನೆಗೆ ಚೈತನ್ಯಕೊಡಬಲ್ಲ ಒಂದು ವಿಷಯುವಾಗಿದೆ. ನಮ್ಮನ್ನು ನಾವು ಅರ್ಥ ಮಾಡಿಕೊಳ್ಳಬೇಕಾದರೆ ನಮಗೆ ಬೇಕಾಗಿರುವ ಚೌಕಟ್ಟು ಮನುಷ್ಯನ ಪ್ರಜ್ಞೆಯನ್ನು ಮಾತ್ರ ವಿಶ್ಲೇಶಿಸುವ 'ಆತ್ಮನಿಷ್ಠ' ಚಿಂತನೆಯಲ್ಲಿ ಸಿಗಲಾರದು. ಮನುಷ್ಯನನ್ನು ಅವನ ಪರಿಸರದ ವಲಯದೊಳಗಿಟ್ಟು ನೋಡುವ ವಸ್ತುನಿಷ್ಟ ಚಿಂತನೆ ಮಾತ್ರ ನಮ್ಮೆದುರಿನ ಬದುಕಿಗೆ ವಿಮುಖವಾಗದಂತೆ ನಮ್ಮ ತಿಳುವಳಿಕೆಯನ್ನು ಪೊರೆಯಬಲ್ಲರು.

'ಚಿದಂಬರ ರಹಸ್ಯ'ದ ವಸ್ತು ಒಂದು ಸಂಸ್ಕೃತಿಯಃ ಅವನತಿಯ ಕತೆಯಾಗಿದೆ. ಮನುಷ್ಯನ ನಡುವಳಿಕೆಯ ಮತ್ತು ಮೌಲ್ಯಗಳ ಜಗತ್ತಿನ ಅವನತಿ ಅವನು ತನ್ನ ಪರಿಸರದ ಮೇಲೆ ಮಾಡುವ ದೌರ್ಜನ್ಯದ ಫಲಶ್ರುತಿಯಾಗಿರುವುದನ್ನು ಕತೆ ತೋರಿಸುತ್ತದೆ. ಅಂದರೆ ಮನುಷ್ಯ ಪ್ರಪಂಚ ಮತ್ತು ಪರಿಸರದ ಮಧ್ಯೆ ತೀರ ಯಾಂತ್ರಿಕವಾದ ಕಾರಣ—ಪರಿಣಾಮದ ಸಂಬಂಧವನ್ನು ತೇಜಸ್ವಿ ಗುರುತಿಸುತ್ತಾರೆ. ಅಂತಲ್ಲ ಮನುಷ್ಯನ ನಡುವಳಿಕೆಯ ಪ್ರಪಂಚ ಕೃತಿಯಲ್ಲಿ ದಟ್ಟವಾಗಿದೆ. ಎಲ್ಲ ಪಾತ್ರಗಳೂ 'ಸ್ವಾತಂತ್ರ್ಯದ ಭ್ರಮೆಯಲ್ಲಿ' ತಮ್ಮ ಸ್ವಭಾವಕ್ಕೆ ಅನುಗುಣವಾಗಿ, ತಮ್ಮ ತುರ್ತುಗಳಿಗೆ ಪಕ್ಕಾಗಿ ವರ್ತಿಸುತ್ತದೆ. ಹಾಗೆಯೇ ನಿಸರ್ಗವೂ ತನ್ನದೇ ಆದ ಲಯಗಳಿಗೆ ಬದ್ಧವಾಗಿರುವಂತೆ ಜೀವಂತವಾಗಿ ಚಿತ್ರಿತವಾಗಿದೆ. ಆದರೆ ಈ ಎರಡೂ 'ಸ್ವತಂತ್ರ' ಪ್ರಪಂಚಗಳ ಮಧ್ಯೆ ಇರುವ ಸಂಬಂಧ ಅವೆರಡನ್ನೂ ಮೀರಿದ ಇನ್ನೊಂದು Pattern ಆಗಿ ಹೊಮ್ಮುತ್ತದೆ. ಸೂಕ್ಷ್ಮವಾಗಿ ನೋಡಿದಲ್ಲಿ ಕಾದಂಬರಿಯಲ್ಲಿ ಪರಸ್ಪರ ಹೆಣೆದುಕೊಂಡಿರುವ ಕೆಲವು ಎಳೆಗಳನ್ನು ಗುರುತಿಸಬಹುದು. ಒಂದು ಕಡೆ ಕೆಸರೂರಿನ ಚಿಲ್ಲರೆ ರಾಜಕೀಯ, ಭ್ರಷ್ಟತೆಯ ಗೋಜಲು ಗೋಜಲಾದ ಅಧೋಗತ ಸಮಾಜವಿದೆ. ಇನ್ನೊಂದು ಕಡೆಗೆ ಈ ರಾಜಕೀಯದಿಂದ ಪ್ರೇರಿತವಾದ ನಿಸರ್ಗದ ಮೇಲೆ ನಡೆಯುವ ದೌರ್ಜನ್ಯವಿದೆ. ಮತ್ತೊಂದು ಕಡೆಗೆ

ಮನುಷ್ಯನ ನಡುವಳಿಕೆಯ ಸ್ವಾತಂತ್ರ್ಯದ ಬಗ್ಗೆ ಪ್ರಶ್ನೆಗಳನ್ನು ಕೆದಕುವ ತಾತ್ವಿಕ ಚಿಂತನೆಯಿದೆ. ಕಾದಂಬರಿಯ ಅದ್ಭುತ ಸಾಧನೆಯೆಂದರೆ ಈ ಎಳೆಗಳು ಎಲ್ಲ ಹೆಣಿಕೆಯಾಗಿವೆ ಎನ್ನುವುದನ್ನು ಗುರುತಿಸುವುದು ಕಷ್ಟವೆನಿಸುವ ಮಟ್ಟಿಗೆ ಅವೆಲ್ಲ ಮಿಳಿತವಾಗಿರುವುದು. ಹೀಗಾಗಿ ಕೃತಿ ನಿಸರ್ಗವನ್ನು ಮನುಷ್ಯ ಪ್ರಪಂಚದ ಹಿನ್ನಲೆಯಲ್ಲಿ ಮತ್ತು ಮನುಷ್ಯನ ನಡುವಳಿಕೆಯನ್ನು ಬದುಕಿನ ವಿಶಾಲವಾದ ಹಿನ್ನಲೆಯಲ್ಲಿ ಅರ್ಥಮಾಡಿಕೊಳ್ಳುವಂತೆ ಒತ್ತಾಯಿಸುತ್ತದೆ. ಇದಕ್ಕೆ ಪೂರಕವಾಗಿ ತೇಜಸ್ವಿ ಪತ್ತೆದಾರಿ ಕತೆಯ ಹಂದರವನ್ನು ಅತ್ಯಂತ ಸಮರ್ಥವಾಗಿ ಬಳಸಿಕೊಂಡಿದ್ದಾರೆ. ಪತ್ತೆದಾರಿ ಕಾದಂಬರಿಯೊಂದರಲ್ಲಿ ಗೋಜಲು ಗೋಜಲಾಗಿರುವ ಎಳೆಗಳನ್ನು ಬಿಡಿಸಿ ಕತೆಯ ಕೇಂದ್ರವನ್ನು ಕಂಡುಕೊಂಡಾಗ ಕತೆಯ ಎಲ್ಲ ವಿವರಗಳ ಉದ್ದೇಶ ಅರ್ಥವಾಗುತ್ತದೆ. ಹಾಗೆಯೇ ಅಂಥ ಹಂದರವುಳ್ಳ ಈ ಕಾದಂಬರಿಯಲ್ಲಿ ಕಾದಂಬರಿಯ ಎಲ್ಲ ಎಳೆಗಳ, ಘಟನೆಗಳ ಪೂರ್ತಿ ಅರ್ಥವಾಗು ವುದು ಅದರ ಕೇಂದ್ರವನ್ನು ನಾವು ಕಂಡುಕೊಂಡಾಗಲೇ, ಅದಷ್ಟೇ ಮೂರ್ತವಾಗಿದ್ದರೆ ಎಲ್ಲ ಘಟನೆಗಳು ಒಂದು ನಿರ್ದಿಷ್ಟ ಕೇಂದ್ರದತ್ತ ತುಡಿಯುತ್ತವೆ. ಪತ್ತೆದಾರಿ ಕಾದಂಬರಿಯಲ್ಲಿಯಂತೆ ಇಲ್ಲಿಯೂ ಆ ಕೇಂದ್ರ ನಮ್ಮ ಎದುರಿಗೆ ಬರುವುದು ಕೊನೆಯ ಭಾಗದ ಕ್ಲೈಮ್ಯಾಕ್ಸಿನಲ್ಲಿ. ಈ ಕಾದಂಬರಿಯ ಶಿಖರ ಇರುವುದು ಲಂಟಾನಾ ಜಿಗ್ಗಿಗೆ ಹತ್ತಿದ ಬೆಂಕಿ ಮತ್ತು ಕೆಸರೂರಿನಲ್ಲಿ ನಡೆಯುವ ಜಾತಿಯ ದಂಗೆಯ ಘಟನೆಗಳಲ್ಲಿ ನಿಸರ್ಗದ ಮೇಲೆ ಮನುಷ್ಯ ಮಾಡುತ್ತ ಬಂದಿದ್ದ ದೌರ್ಜನ್ಯ ನಿಸರ್ಗದ ಪರಿಸರದ ನಾಶದೊಂದಿಗೆ ಪರಾಕಾಷ್ಟೆಯನ್ನು ತಲುಪುತ್ತದೆ.

"ಕೆಸರೂರು ಮಳೆಗಾಲದ ನಾಲ್ಕು ತಿಂಗಳು ಮಾತ್ರ ಕೆಸರೂರಷ್ಟೆ. ಅನಂತರ ಸದಾ ತಣ್ಣಗಿರುವ ನಿತ್ಯ ಹರಿದ್ವರ್ಣದ ಕಾಡಿನಿಂದ ಸುತ್ತುವರೆದಿದ್ದ ಇದು ಒಂದು ಅಪ್ಸರ ಲೋಕ. ಗಿರಿತಪ್ಪಲಿನ ಈ ಪುಟ್ಟ ಊರು ಕರ್ನಾಟಕದ ಸ್ವಿಜರ್ಲ್ಯಾಂಡ್" (ಪು. 44).

ಇಂಥ ಒಂದು ಪರಿಸರದ ಸರ್ವನಾಶವಾಗುವುದು ಮನುಷ್ಯನ ಸ್ವಾರ್ಥಪರತೆ, ಉದಾಸೀನತೆಯಿಂದ. ಕೊನೆಗೆ ಉರಿಯುತ್ತಿರುವ ಲಂಟಾನಾದ ಮಾರಕವಾದ ಹೊಗೆ ಕೆಸರೂರಿನ ಜಾತಿಯ ದಂಗೆಗಳಲ್ಲಿ ಉಳಿದವನ್ನು ಬದುಕಗೊಡುವುದಿಲ್ಲ. ಕಾದಂಬರಿಯ ಒಂದು ಮುಖ್ಯ ಎಳೆ ನಿಸರ್ಗದ ಮೇಲೆ ನಡೆಯುವ ದೌರ್ಜನ್ಯದ ಹಂತಗಳನ್ನು ಗುರುತಿಸುತ್ತದೆ. ಇನ್ನೊಂದು ಕಡೆಗೆ ಸಂಸ್ಕೃತಿಯ ಅಧಃಪತನದ ಪರಾಕಾಷ್ಟೆಯಾದ ಜಾತಿಯ ದೊಂಬಿ ಮನುಷ್ಯ ಪ್ರಪಂಚವನ್ನು ನಾಶ ಮಾಡುತ್ತದೆ. ಅದು ಕೂಡ ಕ್ರಮೇಣವಾಗಿ ಉಲ್ಬಣಗೊಂಡು ಸಮಾಜವನ್ನು ನಾಶ ಮಾಡುವ ವಿಷಶಕ್ತಿಯಾಗಿದೆ. ಕಾದಂಬರಿಯ ಈ ಎರಡೂ ಕೊನೆಯ ಹಂತದ ಘಟನೆಗಳು, ಈ ಎರಡೂ ಪ್ರಪಂಚಗಳ ನಾಶವನ್ನು ತೋರಿಸುತ್ತವೆ. ಇದನ್ನು ಕಾದಂಬರಿಯ ಉತ್ತುಂಗವೆಂದುಕೊಂಡರೆ ಕಾದಂಬರಿಯ



ಶೂದ್ರ

ಎಲ್ಲ ವಿವರಗಳು ಈ ಅವನತಿಯ ಪರಾಕಾಷ್ಠೆಯತ್ತ ಬೆರಳು ಮಾಡಿ ತೋರಿಸುವ ಕುರುಹುಗಳಾಗಿವೆ ಎಂದು ಹೇಳಬಹುದು. ಉದ್ದೇಶ ಪೂರ್ವಕವಾಗಿಯೇ ನಿಗೂಢವಾಗಿರುವ ಎಲ್ಲ ಅಂಶಗಳು ಈ ಕೇಂದ್ರದ ಹಿನ್ನಲೆಯಲ್ಲಿ ತಮ್ಮ ರಹಸ್ಯವನ್ನು ಬಿಟ್ಟುಕೊಡುತ್ತವೆ. ತೇಜಸ್ವಿ ಪತ್ತೇದಾರಿಯನ್ನು 'ನೆಪಮಾತ್ರಕ್ಕೆ ಬಳಸಿಕೊಂಡಿದ್ದಾರೆ' ಎನ್ನುವುದಕ್ಕಿಂತ ಪತ್ತೆದಾರಿಯ ಎಲ್ಲ ಉತ್ತಮ ಅಂಶಗಳನ್ನು ತಮ್ಮ ಉದ್ದೇಶಗಳಿಗಾಗಿ ಸಮರ್ಥವಾಗಿ ದುಡಿಸಿಕೊಂಡಿದ್ದಾರೆ ಎನ್ನುವುದು ಸೂಕ್ತವಾಗುತ್ತದೆ.

ಕೃತಿಯ ಹಿಂದೆ ಕೆಲಸ ಮಾಡುತ್ತಿರುವುದು ಒಂದು ಪ್ರಬುದ್ಧವಾದ ವ್ಯಂಗ್ಯ. ಕಾದಂಬರಿಯ ಎಲ್ಲ ಪಾತ್ರಗಳೂ ಯಾವುದೋ ಒಂದು ಚಿದಂಬರ ರಹಸ್ಯವನ್ನು ಹುಡುಕುವ ತೊಳಲಾಟದಲ್ಲಿರುತ್ತವೆ. ಆ ಚಿದಂಬರ ರಹಸ್ಯವೇ ಕಾದಂಬರಿಯ ಅತ್ಯಂತ ಮುಖ್ಯವಾದ ಅಂಶವಾಗಿರಬಹುದೇನೋ ಎನ್ನುವ ಭಾವನೆ ಬರತೊಡಗುತ್ತದೆ. ಆದರೆ ವಾಸ್ತವವನ್ನು ಅರ್ಥ ಮಾಡಿಕೊಳ್ಳದೇ, ಎದುರಿಸದೇ ಪಾತ್ರಗಳು ಸೃಷ್ಟಿಸುವ ಚಿದಂಬರ ರಹಸ್ಯಗಳೆಲ್ಲವೂ ಅಮುಖ್ಯವಾಗಿ ಬಿಡುತ್ತವೆ. ಅವು ಮನುಷ್ಯನನ್ನು ದಾರಿ ತಪ್ಪಿಸುವ ಗೀಳುಗಳಾಗಿ ಬಿಡುತ್ತವೆ. ಇದು ನಮಗೆ ಸ್ಪಷ್ಟವಾಗುವುದು ಕಾದಂಬರಿಯ ಇನ್ನೊಂದು ಮುಖ್ಯ ಎಳೆಯಾದ ಜಯರಾಂ ಕಲ್ಪಿಸುವ ಕಥೆಯ ಮೂಲಕ. ಅವನು ಕತೆ ಕಟ್ಟುವುದರ ಹಿನ್ನಲೆಯಾಗಿ ನಡೆಯುವ ತಾತ್ವಿಕ ಚರ್ಚೆ ಗಂಭೀರವಾಗಿದೆ. ಅಲ್ಲದೆ ಆ ಕತೆಯ ತರ್ಕಬದ್ಧ ಊಹೆಯ ಹಾಗೆಯೇ ಘಟನೆಗಳು ಸ್ವಲ್ಪಮಟ್ಟಿಗೆ ನಡೆಯುತ್ತವೆ. ಆದರೆ ಆ ಕತೆಯನ್ನು ನಂಬಿ ಅದಕ್ಕೆ ಸಾಕ್ಷ್ಯಾಧಾರಗಳನ್ನು ಹುಡುಕುವ ಕೆಲಸ ದಾರಿತಪ್ಪಿಸುವಂತಹದ್ದು ಎನ್ನುವುದು ಬಹುಬೇಗನೆ ಸ್ಪಷ್ಟವಾಗುತ್ತದೆ. ಅದು ಅಂಗಾಡಿಯ ರೋಚಕ ಕತೆಯ ತೆವಲನ್ನು ತೀರಿಸಬಹುದೇ ಹೊರೆತು ವಾಸ್ತವವನ್ನು ಅರ್ಥಮಾಡಿಕೊಳ್ಳುವುದರಲ್ಲಿ ಸಹಾಯವಾಗಲಾರದು. ಆ ಕತೆಯ ಬಗ್ಗೆ ಸ್ವತಃ ಜಯರಾಂ ಮತ್ತು ಡಾ. ಪಾಟೀಲರು ತಾಳುವ ನಿಲುವುಗಳು ಇದನ್ನು ಸ್ಪಷ್ಟಗೊಳಿಸುತ್ತವೆ. ಜಯರಾಂ ನಡೆದ ಸಂಗತಿಗಳ ತುಣುಕುಗಳನ್ನು ಜೋಡಿಸಿ ವಾಸ್ತವವನ್ನು ಹೋಲುವಂತಹ ಕತೆಯೊಂದನ್ನು ಕಟ್ಟುವುದು ಅಂಗಾಡಿಯ ಸಮಾಧಾನಕ್ಕೆ ಮಾತ್ರವಲ್ಲ, ಒಂದು ತಾತ್ವಿಕ ಚಿಂತನೆಯನು ಪರೀಕ್ಷೆಗೊಡ್ಡುವುದಕ್ಕಾಗಿ ಕೂಡ. ಮನುಷ್ಯ ವರ್ತಿಸುವುದು ಸ್ವಾತಂತ್ರ್ಯದ ಭ್ರಮೆಯಲ್ಲಿಯೋ ಅಥವಾ ಸನ್ನಿವೇಶಗಳ ವಿಧಿನಿಯಮಗಳ ಪ್ರಕಾರವೋ ಎನ್ನುವ ಚರ್ಚೆಯ ಫಲವಾಗಿ ಜಯರಾಂ ತನ್ನ ಕತೆಯನ್ನು ಸೃಷ್ಟಿಸುತ್ತಾನೆ. ರಾಮಚಂದ್ರ ಮತ್ತು ಜಯರಾಂ ಮಧ್ಯೆ ನಡೆಯುವ ಚರ್ಚೆಯ ಈ ಕೆಲವು ಮಾತುಗಳನ್ನು ಇಲ್ಲಿ ಗಮನಿಸಬಹುದು. "ಎಂಥ ಕಾಲ್ಪನಿಕ ಕತೆ ಆದರೂ ಅದರಲ್ಲಿನ ಪಾತ್ರಗಳನ್ನು ಮನಬಂದಂತೆ ರೂಪಿಸೋದು ಅಸಾಧ್ಯ. ಅವು ತನ್ನದೇ ಆದ ನಿಯಮಗಳ ಪ್ರಕಾರ ವ್ಯಕ್ತಿತ್ವ ರೂಪಿಕೊಳ್ಳುತ್ತಾ ವಿಕಾಸವಾಗುತ್ತಾ ಹೋಗುತ್ತವೆ. ಹೇಗೆ ಜೀವನದಲ್ಲಿ ವ್ಯಕ್ತಿಗಳ ನಡು

ವಳಿಕೆಗೆ ಆರ್ಥಿಕ ಸಾಮಾಜಿಕ ಅನುಷಂಗಿಕ ಕಾರಣಗಳಿರುತ್ತವೆಯೋ ಹಾಗೆ ಕಲಾಕೃತಿಗಳೂ ಕೂಡ. ಇದಕ್ಕೆ ವ್ಯತಿರಿಕ್ತವಾದಾಗ ಅದೊಂದು ಕೀಳು ಕಲಾಕೃತಿ ಅನ್ನುತ್ತೇವೆ," (ರಾಮಚಂದ್ರ ಪು. 118),

"ಇರಬಹುದು, ಸ್ವಾತಂತ್ರ್ಯದ ಭ್ರಮೆಯಲ್ಲಿಯೇ ನಾವು ನಿಯಮಗಳ ಬಂಧಿಗಳಾಗಿರಬಹುದು. ಆದರೆ ನಾವು ಸ್ವತಂತ್ರರೋ, ನಿಯಮಗಳ ಬಂಧಿಗಳೋ ಪರೀಕ್ಷಿಸಿ ಪತ್ತೆಹಚ್ಚುವುದು ಜೀವನದಲ್ಲಂತೂ ಸಾಧ್ಯವೇ ಇಲ್ಲ. ಕಾಲ ಜೀವಿಗಳ ವರ್ತಮಾನದ ಒಂದು ಕ್ಷಣದಲ್ಲಿ ಏಕಕಾಲದಲ್ಲಿ ಎರಡು ರೀತಿಯಲ್ಲಿ ವರ್ತಿಸಬಹುದಾದ ಸ್ವಾತಂತ್ರ್ಯ ನಿನಗೆ ಸಿಕ್ಕಾಗ ಮಾತ್ರ ಅದನ್ನು ನಾವು ಪತ್ತೆ ಹಚ್ಚಲು ಸಾಧ್ಯ. ಕಾಲದೇಶಗಳ ಈ ವರ್ತಮಾನದ ಕ್ಷಣಗಳಲ್ಲಿ ನಮಗೆ ಒಮ್ಮೆ ಒಂದೇ ಒಂದು ಸಾರಿ ಮಾತ್ರ ವರ್ತಿಸೋ ಸ್ವಾತಂತ್ರ್ಯ ಅಥವಾ ಬಂಧನ ಇರವುದು". (ಜಯರಾಂ ಪು. 119).

ಒಂದು ಕಾಲ ಮತ್ತು ದೇಶದ ಮಿತಿಯಲ್ಲಿ ಒಂದೇ ಒಂದು ರೀತಿಯಲ್ಲಿ ಮಾತ್ರ ಮನುಷ್ಯ ವರ್ತಿಸುವುದು ಸಾಧ್ಯವಾದಲ್ಲಿ ಅವನಿಗೆ ಇರುವ ಸ್ವಾತಂತ್ರ್ಯ ಒಂದು ಭ್ರಮೆ ಮಾತ್ರ. ಒಬ್ಬ ಸೃಷ್ಟಿಶೀಲ ಬರಹಗಾರ ಕಾಲದೇಶಗಳ ಸನ್ನಿವೇಶವನ್ನು ಪುನಃ ಸೃಷ್ಟಿ ಮಾಡಿ ಮನುಷ್ಯ ವರ್ತಿಸಬಹುದಾದ ಇನ್ನೊಂದು ಬಗೆಯನ್ನು ಊಹಿಸಬಹುದೇ ಎನ್ನುವುದರ ಬಗ್ಗೆ ಚರ್ಚೆ ನಡೆಯುತ್ತದೆ. ಆದರೆ ಅಂಗಾಡಿ ಇದನ್ನು ತನ್ನದೆ ಆದ ರೀತಿಯಲ್ಲಿ ಅರ್ಥೈಸುತ್ತಾನೆ. ಅವನ ಪ್ರಕಾರ ಒಂದು ಕೃತಿಯ ಪಾತ್ರಗಳೂ ಕೂಡ ಅನಿವಾರ್ಯವಾದ ಒಂದು ರೀತಿಯಲ್ಲಿ ವರ್ತಿಸುವುದಾದರೆ ಘಟನೆಗಳ ಪುನಃ ಸೃಷ್ಟಿ ವಾಸ್ತವದ ಮುಸುಕಿದ ಎಳೆಗಳನ್ನು ಹೊರತರಬಹುದಲ್ಲ; ಆದ್ದರಿಂದ ಅವನು ಜಯರಾಂ ಸೃಷ್ಟಿಸಿರುವ ಕತೆಗೆ ತಕ್ಕ ಸಾಕ್ಷ್ಯಾಧಾರಗಳನ್ನು ಹುಡುಕತೊಡುಗುತ್ತಾನೆ. ಕಾದಂಬರಿಯ ವ್ಯಂಗ್ಯವೆಂದರೆ ಅವನು ಮತ್ತು ಇತರರು ಈ ಸಾಕ್ಷ್ಯಗಳನ್ನು ಹುಡುಕುವುದು ಸಾಧ್ಯವಾಗುತ್ತದೆ. ಆದರೆ ಈ ತರ್ಕದ ಪೊಳ್ಳುತನವನ್ನು ಭಂಗಿಸುವವರು ಡಾ. ಪಾಟೀಲ್. ಅಂತಹುದೇ ತರ್ಕದ ಬೆಂಬಲದಿಂದ ಜೋಗಿಹಾಳಸತ್ತೇ ಇಲ್ಲ, ಎನ್ನುವುದನ್ನು ಸಿದ್ಧಮಾಡಿ ತೋರಿಸುವುದು ಸಾಧ್ಯ ಎಂದು ತೋರಿಸುತ್ತಾರೆ. ಅವರು ಹೇಳುವಂತೆ ಕತೆಯನ್ನು ಕಟ್ಟಿ ಅದಕ್ಕೆ ಸಾಕ್ಷಿ ಹುಡುಕುವುದು ಅತಿ ಬುದ್ಧಿವಂತಿಕೆಯ ಅವಿವೇಕ. ಜಯರಾಂನ ನಿಲುವು ಕೂಡ ಇಲ್ಲಿಂದಲೇ ಬದಲಾಗತೊಡಗುತ್ತದೆ. ಅವನು ಅರ್ಥ ಮಾಡಿಕೊಳ್ಳುವಂತೆ ಕೆಸರೂರಿನಲ್ಲಿ ಪ್ರತಿಯೊಬ್ಬರೂ ತಮ್ಮ ಕಡೆಗೆ ಸಾಕ್ಷಿಗಳನ್ನು ಹುಡುಕುತ್ತಿರುತ್ತಾರೆ ಮತ್ತು ನಂಬಿಕೆಯ ಬಲದಿಂದ ಅವುಗಳನ್ನು ಕಂಡು ಹಿಡಿಯುತ್ತಾರೆ ಕೂಡ. ಆದರೆ ಇದೆಲ್ಲವೂ ವಾಸ್ತವದಿಂದ ವಿಮುಖರಾಗುವ ಒಂದು ಪ್ರಯತ್ನವೆನ್ನುವುದನ್ನು ಜಯರಾಂ ಅರ್ಥ ಮಾಡಿಕೊಳ್ಳುತ್ತಾನೆ. ಹೀಗಾಗಿ ಬಹಳ ಮುಖ್ಯವೆಂದು ತೋರುವ ರಹಸ್ಯಗಳೆಲ್ಲ ಅರ್ಥ

ಹೀನವೆಂದು ಗೊತ್ತಾಗಿ ಬಿಡುತ್ತದೆ. ಜೋಗಿಹಾಳಗ ಸಾವು. ಕೃಷ್ಣೇಗೌಡರ ಮನೆಯ ಮೇಲೆ ಬೀಳುವ ಕಲ್ಲುಗಳು, ಕೆಸರೂರು ಹೈಬ್ರಿಡ್ ಈ ಎಲ್ಲ ಚಿದಂಬರ ರಹಸ್ಯಗಳು ಹಾಗೇ ಉಳಿದುಕೊಳ್ಳುತ್ತವೆ. ತೇಜಸ್ವಿ ಪತ್ತೇದಾರಿಯ ರಹಸ್ಯಮಯತೆಯನ್ನು ಸೃಷ್ಟಿಸಿ ಕೊನೆಗೆ ಅದು ನಿರರ್ಥಕವೆಂದು ತೋರಿಸಿ ಬಿಡುತ್ತಾರೆ. ಹೀಗಾಗಿ ನಮ್ಮ ಗಮನ ಈ ಚಿದಂಬರ ರಹಸ್ಯಗಳ ಬದಲು ಅವುಗಳ ಬಗ್ಗೆ ಪಾತ್ರಗಳು ಕೈಕೊಳ್ಳುವ ನೈತಿಕ ನಿಲುವಿನ ಮೇಲೆ ಕುದುರುತ್ತದೆ. "ಅದರ ಮೊದಲನೇ ಹೆಜ್ಜೆ ಇದು. ಯಾವುದನ್ನು ಮರೆ ಮಾಚದೆ ಬದುಕೋದು, ಎಲ್ಲ ಈ ರೀತಿ ಗೋಪ್ಯ ಮಾಡಿ ಬದುಕೋದರಿಂದಲೇ ಹೀಗೆ ಎಲ್ಲರೂ ಒಂದೊಂದು ಕಲ್ಪನೆ ಕತೆಗಳನ್ನು ತಲೇಲಿಟ್ಕೊಂಡು ಅದಕ್ಕೆ ತಕ್ಕಂಥ ಸಂಗತಿ ಸಾಕ್ಷ್ಯಾಗಳನ್ನು ಇರಸ್ಕೋತ ಇರೋದು. ಏನೋ ಸಂಬಂಧವಿತ್ತೆ ; ಅದ್ಯಾಕೆ ? ಏನು ? ಅನ್ನೋದೊಂದು ಗೋಪ್ಯ ಸರಿ. ನನ್ನ ಕಲ್ಪನೆಯ ಕಡೆಗೆ ತಕ್ಕಂತೆ ವ್ಯಾಖ್ಯಾನ ಮಾಡಿ ಅವನ್ನ ನುಂಗುತ್ತೆ". (ಜಯರಾಂ ಪು. 239-40).

"ಸಾವಿನ ಭಯ ಹೋಗೋವರೆಗೂ ನೀವು ನಿಜವಾದ ಮನುಷ್ಯರಾಗಲ್ಲ. ತಿಳ್ಕೋಳಿ, ಸತ್ರೆ ಸತ್ತೆ. ಕತ್ತೆ ಬಾಲಂತ ಇಲ್ಲಿವರೆಗೆ ಬದ್ಕಿದೀನಿ ನೋಡಿ. ನಿಮಗೇ ನಾದ್ರೂ ಬುದ್ಧಿ ಸ್ಥಿಮಿತದಲ್ಲಿದೆಯೇನ್ರಯ್ಯ ಜಯರಾಂ ಹೇಳಿದ್ದು ನೂರಕ್ಕೆ ನೂರರಷ್ಟು ಸತ್ಯಾಂಶ ಆದರೂ ಗಂಭೀರವಾಗಿ ಬದುಕಿ ಗಂಭೀರವಾಗಿ ಸಾಯೋಣ." (ಪಾಟೀಲ್ ಪು. 163).

ಜಯರಾಂ ಮತ್ತು ಪಾಟೀಲರು ತಾವು ತಾಳುವ ಈ ನೈತಿಕ ನಿಲುವುಗಳಿಂದ ಕಟ್ಟುವ ಕತೆಗೆ ಸಾಕ್ಷ್ಯ ಹುಡುಕುವ ಅವಿವೇಕದಿಂದ ಮುಕ್ತರಾಗುತ್ತಾರೆ. ಅವರಿಬ್ಬರೂ ಕಂಡು ಕೊಳ್ಳುವಂತೆ ಮುಖ್ಯವಾಗಿರುವುದು ಚಿದಂಬರ ರಹಸ್ಯವನ್ನು ಬೆನ್ನತ್ತುವುದಲ್ಲ ; ವಾಸ್ತವ ವನ್ನು ಅರ್ಥಮಾಡಿಕೊಂಡು ನೈತಿಕ ಜವಾಬ್ದಾರಿಯಿಂದ ವರ್ತಿಸುವುದು. ಇವರಿಬ್ಬರ ನಿಲುವುಗಳಿಂದಾಗಿ ಕತೆಯ ರಹಸ್ಯಮಯತೆಯನ್ನು ನಾವು ಸರಿಯಾಗಿ ಬೆಲೆಗಟ್ಟಿ ನೋಡ ಬೇಕಾಗುತ್ತದೆ. ಕಲ್ಪನೆ ಹುಟ್ಟಿಸುವ ಭ್ರಮೆಗಳನ್ನು ವಾಸ್ತವದ ಎದುರಿನಲ್ಲಿ ಕಳೆದು ಕೊಳ್ಳುವುದು ಪಾತ್ರಗಳ ನೈತಿಕ ಬೆಳವಣಿಗೆಯಲ್ಲಿ ಒಂದು ಮುಖ್ಯ ಅಂಶವಾಗುತ್ತದೆ. ಇದಕ್ಕೆ ಪೂರಕವಾಗುವಂತೆ ಹದಿ ವಯಸ್ಸಿನ ಕ್ರಾಂತಿಕಾರಿ ಹುಡುಗರು ಕೂಡ ಪ್ರೇಮದ ಚಿದಂಬರ ರಹಸ್ಯವನ್ನು ಭೇದಿಸುತ್ತಾರೆ. ಅಂದರೆ ಪ್ರೇಮದ ಬಗೆಗಿನ ಭ್ರಮೆಗಳನ್ನು ಕಳಚಿಕೊಂಡು ವಾಸ್ತವವನ್ನು ಕಂಡುಕೊಳ್ಳುತ್ತಾರೆ. ರಫಿ ಮತ್ತು ಜಯಂತಿ ಕೊನೆಗೆ ಬೆತ್ತಲೆಯಾಗಿ ಪುನರ್ಜನ್ಮವನ್ನು ಪಡೆದುಕೊಳ್ಳುತ್ತಾರೆ. ರಫಿ ಜಯಂತಿಯ ಪಾದಗಳನ್ನು ನೋಡಿ ಅವಳು ಮೋಹಿನಿಯಲ್ಲ ಮನುಷ್ಯಳು ಅನ್ನುವುದನ್ನು ಕಂಡುಕೊಳ್ಳುತ್ತಾನೆ. ಅವರಿಬ್ಬರೂ ಹದಿವಯಸ್ಸಿನ ಕಲ್ಪನಾ ಲೋಕದಿಂದ ಹೊರಬಂದು ಪ್ರೇಮದ ನೈಜ ಅನುಭವ ಪಡೆದುಕೊಳ್ಳುತ್ತಾರೆ. ಹೀಗೆ ಕಾದಂಬರಿಯಲ್ಲಿ ರಹಸ್ಯಮಯವಾಗಿ ಕಾಣು

ವುದೆಲ್ಲವೂ ಭ್ರಮೆಯಿಂದ ಹುಟ್ಟಿಕೊಂಡದು. ವಾಸ್ತವದ ಸ್ಪರ್ಶದಿಂದ ಎಲ್ಲವೂ ಸ್ಪಷ್ಟವಾಗುತ್ತದೆ. ಅಂದರೆ ಕಾದಂಬರಿಯ ರಹಸ್ಯಮಯತೆಯನ್ನು ವಾಸ್ತವಕ್ಕಾಗಿ ತಿರಸ್ಕರಿಸುವಂತೆ ತೋರುತ್ತದೆ. ಆದರೆ ಪತ್ತೇದಾರಿ ಅಂಶಗಳ ಪ್ರಯೋಜನ ಈ ವ್ಯಂಗ್ಯಕ್ಕೆ ಮಾತ್ರ ಸೀಮಿತವಾಗಿಲ್ಲ. ಘಟನೆಗಳ ಸುತ್ತಲೂ ಹಬ್ಬಿಕೊಳ್ಳುವ ಗೊಂದಲ ಮತ್ತು ಅಸ್ಪಷ್ಟತೆಗೆ ಒಂದು ತಾತ್ವಿಕ ಅರ್ಥ ಕಾದಂಬರಿಯ ಚೌಕಟ್ಟಿನಲ್ಲಿಯೇ ದೊರೆಯುತ್ತದೆ. ಈ ಎಲ್ಲ ಊಹೆಗಳು, ಭ್ರಮೆಗಳು ವಾಸ್ತವದ ಬಗ್ಗೆ ತೀರ ಸಂಕುಚಿತವಾದ ಸರಳವಾದ ಗ್ರಹಿಕೆಗಳನ್ನು ನಾವು ಮಾಡಲಾಗದು ಎನ್ನುವ ಎಚ್ಚರವನ್ನು ತೋರಿಸುತ್ತದೆ. ಸಾಪೇಕ್ಷವಾದದ ಉದಾಹರಣೆಯನ್ನು ಕೊಟ್ಟು ಪಾಟೀಲರು ವಿವರಿಸುವುದೂ ಇದನ್ನೇ. ಮನುಷ್ಯನಿಗೆ ವಾಸ್ತವ ಮುಖ್ಯ ಹೌದು, ಆದರೆ ವಾಸ್ತವವೂ ಕೂಡ ನಾವು ನೋಡುವ ದೃಷ್ಟಿಯನ್ನು ಅವಲಂಬಿಸಿರುತ್ತದೆ,

"ಇದೆಲ್ಲ ನೀವು ಒಂದನ್ನು ಯಾವ ದೃಷ್ಟಿಯಿಂದ ನೋಡ್ತೀರ ಅನ್ನೋದರ ಮೇಲೆ ನಿಂತಿದೆ. ಗ್ವಾಟೆ ಮಾಲಾದ ರೈತ ಏಲಕ್ಕೀನ ತನ್ನಿಂದ ತಾನೇ ಬೇರು ಬೆಳಲು ಗಡ್ಡೆ ಬಿಸ್ತಾ ಹಬ್ಬಿಕೊಳ್ತಾ ಹೋಗೋ ಗಿಡದಂತೆ ನೋಡಿದ, ಭಾರತದ ರೈತ ಏಲಕ್ಕೀನ ಘೂವು ಕಾಯಿ ಹಣ್ಣು ಬಿಟ್ಟು ಅದರ ಬೀಜ ಬಿದ್ದು ಪ್ರಸಾರ ಆಗೋ ಹಣ್ಣು ಬಿಡೋ ಗಿಡದ ಹಾಗೆ ನೋಡಿದ." (ಪು. 165).

ಹೀಗೆ ಕಾದಂಬರಿಯ ಪತ್ತೇದಾರಿ ಅಂಶ ಅನುಭವಕ್ಕೆ ಹೆಚ್ಚಿನ ಸಂಕೀರ್ಣತೆಯನ್ನು ತಂದುಕೊಡುತ್ತದೆ. ಭ್ರಮೆಗಳಿಂದ ದೂರವಾಗಿ ವಾಸ್ತವವನ್ನು ಗ್ರಹಿಸಿ ನೈತಿಕ ನಿರ್ಣಯಗಳನ್ನು ಕೈಕೊಳ್ಳಬೇಕು. ಆದರೆ ವಾಸ್ತವವನ್ನು ತೀರ ಸಂಕುಚಿತವಾಗಿ ಅರ್ಥೈಸಲಾಗದು ಎನ್ನುವ ಪ್ರಬುದ್ಧ ದೃಷ್ಟಿ ಕಾದಂಬರಿಯ ಹಿಂದಿದೆ. ಹೀಗೆ ಅನುಭವ ಶೋಧನೆಯಲ್ಲಿ ಯಾವ ಆಯಾಮವನ್ನೂ ಬಿಟ್ಟು ಕೊಡದಿರುವ ತೇಜಸ್ವಿಯವರ ಶ್ರದ್ಧೆ ಅಪೂರ್ವವಾಗಿದೆ. ಇದಕ್ಕೆ ಸಂಬಂಧಿಸಿದಂತೆ ಇನ್ನೊಂದು ಅಂಶವನ್ನು ಇಲ್ಲಿ ಗುರುತಿಸಬಹುದು. ವಾಸ್ತವದ ಬಗ್ಗೆ ಮತ್ತು ಬರವಣಿಗೆಯ ಕ್ರಮದ ಬಗ್ಗೆ ತಾವು ತಾಳಿರುವ ನಿಲುವುಗಳನ್ನು ತೇಜಸ್ವಿ ಸ್ಪಷ್ಟವಾಗಿಯೇ ತಿಳಿಸಿಬಿಟ್ಟಿದ್ದಾರೆ. ("ಹೊಸ ದಿಗಂತದ ಕಡೆಗೆ" ಅಬಚೂರಿನ ಪೋಸ್ಟಾಫೀಸು"). ಯಾಂತ್ರಿಕವಾದ ಸಾಂಕೇತಿಕ ಶೈಲಿ ತಂತ್ರಗಳನ್ನು ಅವರು ತ್ಯಜಿಸಿದರು. ಅನುಭವವನ್ನು ನೇರವಾಗಿ ನೋಡಿ ಬರೆಯುವ ವೀಕ್ಷಕನಾಗಿ ವಾಸ್ತವವನ್ನು ದಾಖಲಿಸುವ ಶಿಸ್ತನ್ನು ಕಲಿತುಕೊಂಡೆ ಎಂದೂ ಹೇಳಿದ್ದಾರೆ. ಆದ್ದರಿಂದಲೇ ಅನುಭವದ ಅರ್ಥದ ಎಲ್ಲ ಪದರುಗಳನ್ನು ಹಿಡಿದುಕೊಳ್ಳುವುದಕ್ಕಾಗಿ ಅವರು ಸಾಂಕೇತಿಕತೆಯನ್ನು ಆಶ್ರಯಿಸುವುದಿಲ್ಲ. ಅದರ ಬದಲಾಗಿ ಅವರ ಕೃತಿಗಳಲ್ಲಿ ದಟ್ಟವಾದ ವಾಸ್ತವಿಕ ವಿವರಗಳೇ ರೂಪಕ ಶಕ್ತಿಯನ್ನು ಪಡೆದುಕೊಳ್ಳುತ್ತವೆ. ಚಿದಂಬರ ರಹಸ್ಯದಲ್ಲಿ ಸಂಕೇತಗಳನ್ನು ಹೆಕ್ಕುವುದು ತುಂಬಾ ಸುಲಭವೆನಿಸಬಹುದು.

(ಲಂಟನಾ ಜಿಗ್ಗು, ಏಲಕ್ಕಿ ಇತ್ಯಾದಿ) ಆದರೆ ಕೃತಿಯ ಜೀವಾಳವಿರುವುದು ಸಾಂಕೇತಿಕತೆಯಲ್ಲಿ ಅಲ್ಲ; ಅಲ್ಲಿಯ ಎಲ್ಲ ವಿವರಗಳೂ ಮೂರ್ತವಾಗಿ ವಾಸ್ತವದ ಅಂಶವಾಗಿಯೇ ಚಿತ್ರಿತವಾಗಿವೆ. ಆದರೆ ಸಂಯೋಜಿತವಾದ ಜೀವನ ದೃಷ್ಟಿಯೊಂದಕ್ಕೆ ಒಳಪಟ್ಟಿದರಿಂದ ಎಲ್ಲ ವಿವರಗಳೂ ಹೆಚ್ಚಿನದನ್ನು ಧ್ವನಿಸುತ್ತವೆ. ಬದುಕಿನ ವಾಸ್ತವದ ಬಗ್ಗೆ ಇರುವ ಶ್ರದ್ಧೆಯ ಮೂಲಕವೆ ಅನುಭವ ಅರ್ಥವನ್ನು ಹುಡುಕುವ ರೂಪಕ ಪ್ರತಿಭೆಗೂ ಕೇವಲ ಆಶ್ರಯಗಳಾಗಿರುವ ಪರಿಕಲ್ಪನೆಗಳನ್ನು ಸಾಂಕೇತಿಕತೆಯ ಮೂಲಕ ಅಭಿವ್ಯಕ್ತಿಸುವ ಕ್ರಮಕ್ಕೂ ಇರುವ ವ್ಯತ್ಯಾಸವನ್ನು ಗುರುತಿಸುವುದು ಅವಶ್ಯಕವಾಗಿದ್ದರಿಂದ ಈ ಮಾತನ್ನು ಹೇಳಬೇಕಾಗಿದೆ.

ಕಾದಂಬರಿಯ ಕೊನೆಗೆ ಆಸ್ಫೋಟಗೊಳ್ಳುವ ಕೆಸರೂರು ಮೊದಲಿನಿಂದಲೂ ಒಂದು ಜ್ವಾಲಾಮುಖಿಯಾಗಿರುವುದರ ವಿವರಗಳನ್ನು ಲೇಖಕರು ಕಟ್ಟಿಕೊಡುತ್ತಾ ಹೋಗುತ್ತಾರೆ. ಅಲ್ಲಿ ಎಲ್ಲರಿಗೂ ಅನ್ನಿಸುವುದು ಯಾವುದೋ ಒಂದು ಕೊರತೆಯಿದೆಯೆಂದು ಭ್ರಷ್ಟತೆ ಮತ್ತು ಸ್ವಾರ್ಥಪರ ರಾಜಕೀಯದಿಂದಾಗಿ ಅಲ್ಲಿಯ ಪರಿಸ್ಥಿತಿ ಗೋಜಲು ಗೋಜಲಾಗಿದೆ. ಎಲ್ಲವೂ ಚಿದಂಬರ ರಹಸ್ಯವಾಗಿ ಕಾಣುವುದರಿಂದ ಪ್ರತಿಯೊಬ್ಬರೂ ತಮ್ಮ ಕತೆಗಳಿಗೆ ಅಲ್ಲಿ ಸಾಕ್ಷ್ಯಾಧಾರಗಳನ್ನು ಹುಡುಕುತ್ತಿರುತ್ತಾರೆ. ಇಡೀ ಸಮುದಾಯವೇ ವಾಸ್ತವದಿಂದ ವಿಮುಖವಾಗಿ ಒಂದು ಬಗೆಯ ಬ್ಯಾಡ್ ಫೈತ್‌ನಲ್ಲಿ ಬದುಕುತ್ತಿರುವುದನ್ನು ಕಾಣುತ್ತೇವೆ. ಜಯರಾಂ ಮತ್ತು ರಾಮಚಂದ್ರ ಚರ್ಚೆಯಲ್ಲಿ ಸೂಚಿತವಾಗಿರುವುದರಿಂದ ಸ್ವಾತಂತ್ರ್ಯ ಭ್ರಮೆಯಲ್ಲಿ ಸ್ವೇಚ್ಛೆಯಿಂದ ವರ್ತಿಸುವ ಕೆಸರೂರಿನ ಎಲ್ಲರೂ ನಿಜವಾಗಿಯೂ ಕೊಳೆತುಹೋದ ಒಂದು ವ್ಯವಸ್ಥೆಗೆ ಆಳಾಗಿದ್ದಾರೆ. ಜಾತಿ ವ್ಯವಸ್ಥೆ ಮತ್ತು ಉತ್ಪಾದನಾ ವ್ಯವಸ್ಥೆಗಳೆರಡೂ ಜನರನ್ನು ಅಧೋಗತಿಯತ್ತ ತಳ್ಳಿವೆ. ಕೆಸರೂರು ಇಂದಿನ ಇಂಡಿಯಾದ ಗೊಂದಲಗಳ ಪ್ರಾತಿನಿಧಿಕವಾಗಿದೆ. ಇಲ್ಲಿ ಎಲ್ಲವೂ ತಿರುಚಿಕೊಂಡಿದೆ. ಊರಿನ ಅರ್ಥವ್ಯವಸ್ಥೆಗೆ ಬೆನ್ನೆಲುಬಾಗಿರುವುದು ಏಲಕ್ಕಿ. ಆದರೆ ರಾಜಕೀಯ ಸ್ವಾರ್ಥದಿಂದಾಗಿ ಉತ್ಪಾದನಾ ವ್ಯವಸ್ಥೆಯನ್ನು ನಾಶಮಾಡಿಕೊಳ್ಳುವ ಆತ್ಮಘಾತುಕ ಕೆಲಸದಲ್ಲಿ ಎಲ್ಲರೂ ತೊಡಗಿದ್ದಾರೆ. ಪರಸರದ ಬಗ್ಗೆ ಆಗಿರುವ ಉದಾಸೀನತೆ ಮತ್ತು ತತ್‌ಕ್ಷಣದ ಆಮಿಷಗಳಿಗಾಗಿ ಊರ ಸುತ್ತಲಿನ ಕಾಡನ್ನು ಬ್ಯಾರಿಗಳಿಗೆ ಬಲಿ ಕೊಡುತ್ತಾರೆ. ಬ್ಯಾರಿ ಕಾಡನ್ನು ಸವರಿಬಿಟ್ಟು ಪೂರಕವಾದ ಲಂಟಾನಾ ಜಿಗ್ಗನ್ನು ಬೆಳೆಯಗೊಡುತ್ತಾನೆ. ರಾಕ್ಷಸ ಲಂಟಾನಾ ಕಾಡನ್ನು ಕಬಳಿಸುವ ಜತೆಗೆ ಏಲಕ್ಕಿಯ ಕತ್ತನ್ನು ಹಿಸುಕುತ್ತದೆ. ಏಲಕ್ಕಿಯ ಬೆಳೆ ಇಳಿಮುಖವಾಗಿ ಊರಿನ ಅರ್ಥವ್ಯವಸ್ಥೆಯು ಕುಸಿಯತೊಡಗುತ್ತದೆ. ಈ ಕುಸಿತದಿಂದ ಮೊದಲೇ ಜಡ್ಡುಗಟ್ಟಿದ್ದ ಸಮಾಜ ವ್ಯವಸ್ಥೆಯ ಆಳದಲ್ಲಿರುವ ಕಾರ್ಯ ಹೊರಬರತೊಡಗುತ್ತದೆ; ಕಾದಂಬರಿ

ಯಲ್ಲಿ ಸ್ಪಷ್ಟವಾಗಿ ಸೂಚಿತವಾಗಿರುವಂತೆ ಜಾತಿಯ ಘರ್ಷಣೆ ಕೇವಲ ಒಂದು ಮಾರಕ ವ್ಯವಸ್ಥೆಯ ಉಲ್ಬಣಗೊಂಡ ಸ್ಥಿತಿ ಮಾತ್ರವಲ್ಲ. ಆರ್ಥಿಕ ಕುಸಿತದಿಂದ ಹುಟ್ಟಿಕೊಳ್ಳುವ ಆತ್ಮಘಾತುಕ ಪ್ರವೃತ್ತಿಯೂ ಆಗಿದೆ. ಮೂಲದಲ್ಲಿಯೇ ಆದ ಈ ಕುಸಿತವನ್ನು ಅರ್ಥಮಾಡಿಕೊಳ್ಳದ ಕೆಸರೂರಿನ ಜನ ಭ್ರಮೆಯಲ್ಲಿ ಬದುಕುತ್ತ ತಮ್ಮ ಪೂರ್ವಗ್ರಹಗಳಿಗೆ ಸಾಕ್ಷ್ಯಗಳನ್ನು ಹುಡುಕುತ್ತಿದ್ದಾರೆ. ಉದ್ಭವ ವೆಂಕಟೇಶ್ವರ ಮತ್ತು ಮೈಕಿನಲ್ಲಿ ನಮಾಜು ಮಾಡುವ ಮಸೀದಿಗಳ ಹಿಂದೆ ಮತಾಂಧರ ಗುಂಪುಗಳು ಕತ್ತಿ ಮಸೆಯತೊಡಗುತ್ತವೆ. ಇಂಥ ವಿಷಮಯ ವಾತಾವರಣದಲ್ಲಿ ಮನುಷ್ಯನ ನೈತಿಕ ಆಯ್ಕೆಗಳು ಗೊಂದಲವನ್ನು ಮಾತ್ರ ಹುಟ್ಟಿಸುತ್ತವೆ. ಪಾಟೀಲರಂಥ ಒಬ್ಬ ವಿಜ್ಞಾನಿ ಮಂತ್ರ ತಂತ್ರ ಮಾಡುವ ಗುಮಾನಿಗೆ ಒಳಗಾಗುತ್ತಾರೆ, ವಿಚಾರವಾದಿಗಳೂ ಅಷ್ಟೆ. ಕಾಲೇಜಿನ ಫಂಕ್ಷನ್‌ನಲ್ಲಿ ನಾವು ನೋಡುವಂತೆ ಯಾವುದನ್ನು ವಿರೋಧಿಸಬೇಕು ಎನ್ನುವವರ ಬಗ್ಗೆ ಎಲ್ಲರಲ್ಲೂ ಸಂಶಯಗಳಿರುವಂತೆ ಕೊನೆಗೆ ಯಾರನ್ನು ತದಕಬೇಕು ಎನ್ನುವ ಸಂಧಿಗದಲ್ಲಿ ಪೋಲಿಸರಿದ್ದಾರೆ. ಆಚಾರಿಯಂಥವರು ತಮ್ಮ ಚಾಲಾಕಿತನದಿಂದ ಗುಂಪುಗಾರಿಕೆಯನ್ನು ಬೆಳೆಸುತ್ತಾ ಸಮಾಜದಲ್ಲಿರುವ ಘರ್ಷಣೆಗಳನ್ನು ಉಲ್ಬಣಗೊಳಿಸುತ್ತಿರುತ್ತಾರೆ. ಸಂಶೋಧನೆ ಕೂಡ ಇಂಥ ಮಾರಕವಾದ ಪರಿಸರದಲ್ಲಿ ದಾರಿ ತಪ್ಪುತ್ತಿದೆ. ಪಾಟೀಲರು ಸೂಚಿಸುವಂತೆ ಕೆಸರೂರಿನಲ್ಲಿ ಏಲಕ್ಕಿ ಬೆಳೆಯ ಬಗ್ಗೆ ಆಲೋಚನೆ ಮಾಡುವವರು ಇಡೀ ಸಮಾಜದ ವ್ಯವಸ್ಥೆಯನ್ನು ಅರ್ಥಮಾಡಿಕೊಳ್ಳಬೇಕಾಗಿದೆ. ಯಾಕೆಂದರೆ ಇಲ್ಲಿ ಎಲ್ಲವೂ ತಳಕು ಹಾಕಿಕೊಂಡು ಗೊಂದಲಮಯವಾಗಿಬಿಟ್ಟಿದೆ. ಕೆಸರೂರಿನ ಜನ ಸ್ಪಂದಿಸುತ್ತಿರುವುದು ಪರಿಸ್ಥಿತಿಯ ಮೇಲು ನೋಟದಲ್ಲಿ ಕಾಣುವ ಲಕ್ಷಣಗಳಿಗೆ ಮಾತ್ರ. ಒಳಗೇ ಉಲ್ಬಣಗೊಂಡ ರೋಗದ ಮೂಲವನ್ನು ಗುರುತಿಸಬಲ್ಲ ಪಾಟೀಲರಂಥವರು ಸಿನಿಕರಾಗಿ ಕಾಣುತ್ತಾರೆ. ಕಾದಂಬರಿಯ ಉದ್ದಕ್ಕೂ ರೋಗಗ್ರಸ್ತ ಸಂಸ್ಕೃತಿಯೊಂದರ ವಿಶ್ಲೇಷಣೆ ಇದೆ. ಒಂದು ದೃಷ್ಟಿಯಲ್ಲಿ ಪತ್ತೇದಾರಿಗೂ ಇಂಥ 'ವೈದ್ಯಕೀಯ' ವಿಶ್ಲೇಷಣೆಗೂ ಬಹಳ ಸಾಮ್ಯಗಳಿವೆ. ಕುರುಹುಗಳನ್ನು ಹುಡುಕಿ ನಡೆದ ಸಂಗತಿಗಳ ಮೂಲಗಳನ್ನು ಕಂಡು ಹಿಡಿಯುವ ಪತ್ತೇದಾರನಂತೆ ರೋಗದ ಲಕ್ಷಣಗಳನ್ನು ಅರ್ಥಮಾಡಿಕೊಂಡು ಅವುಗಳ ಮೂಲವನ್ನು ಹುಡುಕುವುದೂ ಪತ್ತೇದಾರಿ ಕೆಲಸವೇ. ಆದ್ದರಿಂದಲೇ ಕೆಸರೂರಿನಲ್ಲಿ ನಡೆಯುವ ವಿಲಕ್ಷಣ ಘಟನೆಗಳು ಸಮಾಜಕ್ಕೆ ಹಿಡಿದ ರೋಗದ ಲಕ್ಷಣಗಳಿದ್ದಂತೆ. ಅವುಗಳನ್ನು ಕೆದಕುತ್ತಾ ಹೋದಂತೆ ಆ ರೋಗದ ಸ್ವರೂಪ ಸ್ಪಷ್ಟವಾಗುತ್ತದೆ. ಈ ವಿಶ್ಲೇಷಣೆಯ ಬಗ್ಗೆ ಎರಡು ಮಾತುಗಳನ್ನು ಇಲ್ಲಿ ಹೇಳಬಹುದು. ಸಂಸ್ಕೃತಿಯೊಂದರ ಅವನತಿಗೆ ಕಾರಣವಾಗುವ ಸಾಮಾಜಿಕ ಅಂಶಗಳನ್ನು ಗುರುತಿಸುವ ಜತೆಗೆ ಒಂದು ಕಡೆ ಈ ಲಕ್ಷಣವೂ ಇನ್ನೊಂದು ಕಡೆಗೆ ಅದು ಉಲ್ಬಣಿಸುವುದಕ್ಕೆ ಕಾರಣವೂ ಆದ ಮನೋಸ್ಥಿತಿಗಳನ್ನು ಕೂಡ ತೇಜಸ್ವಿ ಗುರುತಿಸುತ್ತಾರೆ. ಈ ಮನೋಸ್ಥಿತಿಗಳಲ್ಲಿ ಮುಖ್ಯವಾಗಿರುವುದು ಇಡಿಯಾದ ಮನಸ್ಸಿನ ದೊಡ್ಡ ಖಾಯಿಲೆಯಾದ

ವಾಸ್ತವದಿಂದ ವಿಮುಖವಾಗಿ ಭ್ರಮೆಗಳನ್ನು ಆಶ್ರಯಿಸುವ ಹಿಂಜರಿತ. 'ಕೆಸರೂರಿನ ತುಂಬಿದೆದೆಯ ಲೌಡಿಯರ' ಬಗ್ಗೆ ಭ್ರಮೆಗಳನ್ನು ಕಟ್ಟಿಕೊಳ್ಳುವ ಹದಿಹರಯಸ್ಸಿನ ಹುಡುಗರ ಮನೋಸ್ಥಿತಿಗೂ ತಮ್ಮ ಪೂರ್ವಗ್ರಹಗಳ ಸಮರ್ಥನೆಗಾಗಿ ಸಾಕ್ಷಿ ಹುಡುಕುವ ಕೆಸರೂರಿನ ನಾಗರೀಕರ ಮನೋಸ್ಥಿತಿಗೂ ಹೆಚ್ಚಿನ ವ್ಯತ್ಯಾಸವಿಲ್ಲ. ಅವೆರಡೂ ಅಪ್ರಬುದ್ಧ ಮತ್ತು ಕುಂಠಿತವಾದ ಮಾನಸಿಕ ಬೆಳವಣಿಗೆಯ ಲಕ್ಷಣಗಳು. ಇತಿಹಾಸವನ್ನು ನಮ್ಮ ಭ್ರಮೆಗಳಿಗೆ ತಕ್ಕ ಹಾಗೆ ತಿರುಚಿ ಬಿಟ್ಟು ಅನಂತರ ಈ ಕಲ್ಪಿತ ಇತಿಹಾಸದ ಸಮರ್ಥನೆಗೆ ವರ್ತಮಾನದ ವಾಸ್ತವವನ್ನು ತಿರುಚಿ ಬಿಡುವ ಅಪ್ರಬುದ್ಧ ಮನೋಸ್ಥಿತಿ ನಿರ್ಜೀವ ಸಂಸ್ಕೃತಿಯ ಲಕ್ಷಣವಾಗಿದೆ. ನಿಚ್ಚಳವಾಗಿ ಕಣ್ಣಿಗೆ ಕಾಣುವುದು ಚಿದಂಬರ ರಹಸ್ಯವಾಗುತ್ತದೆ. ಕಾದಂಬರಿಯ ಕೊನೆಗೆ ನಾವು ನೋಡುವಂತೆ ಇಂಥ ಮನೋಸ್ಥಿತಿ ಜಾತಿಯ ದಂಗೆಯ ಬರ್ಬರತೆಗೆ ಕಾರಣವಾಗುತ್ತದೆ. ಸಮಾಜದ ಅರ್ಥವ್ಯವಸ್ಥೆ ಜಾತಿ ವ್ಯವಸ್ಥೆಯಂತೆ ಈ ಮನೋಸ್ಥಿತಿ ಕೂಡ ಒಂದು ಸಂಸ್ಕೃತಿಯ ಆತ್ಮಹತ್ಯೆಗೆ ಕಾರಣವಾಗುತ್ತದೆ. ಸಂಸ್ಕೃತಿಯ ಅವನತಿಯ ಇನ್ನೊಂದು ಮುಖವೆಂದರೆ ತನ್ನ ಪರಿಸರದ ಜತೆಗೆ ಆರೋಗ್ಯಕರವಾದ ಸಂಬಂಧಗಳನ್ನು ನಿರ್ಮಿಸಲಾಗದೇ ನಾಶವಾಗುವ ಪ್ರವೃತ್ತಿ. ಮನುಷ್ಯನ ಬದುಕು ಅವನ ಮತ್ತು ಪರಿಸರದ ಮಧ್ಯದ ಸಂಬಂಧಗಳಿಂದ ರೂಪುಗೊಳ್ಳುತ್ತದೆ ಎನ್ನುವುದನ್ನು ಕಡೆಗಾಣಿಸುವ ಸಂಸ್ಕೃತಿಯ ಆತ್ಮವಿಶ್ವಾಸ ಹತ್ತ ಸಾಗುತ್ತದೆ. ಏಕೆಂದರೆ ಮನುಷ್ಯನ ಬದುಕಿನ ಅತೀತಗೋಚರವಾಗುವ, ಅವನ ಸೀಮಿತ ಬದುಕನ್ನು ಮೀರಿದ ಯಾವುದೋ ಒಂದರಲ್ಲಿ ನಂಬಿಕೆ ಇಲ್ಲದಿದ್ದಲ್ಲಿ ಅವನಿಗೆ ತನ್ನ ತತ್‌ಕ್ಷಣದ ತೆವಲುಗಳೇ ಮುಖ್ಯವಾಗಿ ಬಿಡುತ್ತವೆ. ಕಾದಂಬರಿಯಲ್ಲಿ ಆಚಾರಿ, ಕೃಷ್ಣೇಗೌಡ, ರಾಮಾಚಾರಿ, ಕಾಲೇಜಿನ ಪ್ರಿನ್ಸಿಪಾಲ್ ಇವರೆಲ್ಲರೂ ಸ್ವಾರ್ಥಪರ ಕುರುಡು ಸಂಪ್ರದಾಯದ ಪ್ರತಿನಿಧಿಗಳಾಗಿದ್ದಾರೆ. ತಮ್ಮ ತೆವಲುಗಳನ್ನು ತೀರಿಸಿಕೊಳ್ಳುವುದಕ್ಕಾಗಿ ಅವರು ಮಾಡುವ ಮಸಲತ್ತುಗಳು ಇಡೀ ಸಮುದಾಯವನ್ನು ವಿನಾಶದತ್ತ ತಳ್ಳುತ್ತವೆ.

"ಲಂಟಾನಾದ ಈ ಭಯಾನಕ ಜಿಗ್ಗು ಏಲಕ್ಕಿಯ ಕುತ್ತಿಗೆ ಹಿಸುಕಿ ಕಾಡನ್ನೆಲ್ಲಾ ಆಕ್ರಮಿಸಿತು. ಕೆಸರೂರಿನ ಜನ ಇದರ ವಿರಾಟ ರೂಪವನ್ನು ಕಂಡು ಕಂಗಾಲಾದರು. ಯೂಸುಫ್ ಬೇರಿ ಕೆಲಸದ ದೂರಗಾಮಿ ಪರಿಣಾಮಗಳನ್ನು ಅವರು ಊಹಿಸಿರಲಿಲ್ಲ. ಆದರೆ ದುರ್ದೈವದ ಸಂಗತಿ ಎಂದರೆ ಇದು ಅಲ್ಲಿಗೇ ನಿಲ್ಲುವಂಥಾದಾಗಲಿಲ್ಲ. ಜನರ ನಿರ್ಲಿಪ್ತ ಅಸಹಾಯಕತೆಯಲ್ಲಿ ಒಂದು ಸಂಸ್ಕೃತಿಯೇ ಅವಸಾನವನ್ನೈದುತ್ತಿರುವಾಗ ಏನೆಲ್ಲ ಸಂಭವಿಸುತ್ತದೆಯೋ ಅದೆಲ್ಲಾ ಕೆಸರೂರಿನಲ್ಲಿ ಆರಂಭವಾಗಿತ್ತು.

"ಆರು ವರ್ಷದ ಹಿಂದಿನಿಂದ ನಿರಂತರವಾಗಿ ಆತ್ಮ ಮತ್ತು ಪರಿಸರಗಳೆರಡನ್ನೂ ಕಲುಷಿತಗೊಳಿಸಿಕೊಳ್ಳುತ್ತಾ ಬಂದ ಸಂಸ್ಕೃತಿಗೆ ಅದರ ಪರಿಣಾಮ ತಟ್ಟಲಾರಂಭಿಸಿತ್ತು.

ಎಂಥ ಬಿರುಬೇಸಿಗೆಯಲ್ಲಿ ಶುಭ್ರ ತಂಗಾಳಿ ಸೂಸುತ್ತಿದ್ದ ವಿಪಿನ ಈಗ ಲಂಟಾನಾದ ಹಸಿ ಎಲೆಗಳು ಸೀಯುವ ಭೀಕರ ಕಾರ್ಮೋಡ ಒಂದನ್ನು ಉಗಿಯತೊಡಗಿತ್ತು. ಊರಿನ ಜನಕ್ಕೆ ತಾವು ಮಾಡಿದ ತಪ್ಪು ಅರಿವಾಗುವುದರೊಳಗೇ ಹೊಗೆಯ ಗುಂಗಿನಲ್ಲಿ ಭ್ರಾಂತ ರಾಗಿ ಕೆಮ್ಮಿ ಕೆಮ್ಮಿ ಸುಟ್ಟು ಬೂದಿಯಾಗುವದಕ್ಕೆ ಮೊದಲೇ ಅನೇಕರು ಅಸುನೀಗಿದರು. ಉಳಿದವರು ಮೃತಾವಸ್ಥೆಗೆ ಇಳಿದರು.... (ಪು. 273)

ತೇಜಸ್ವಿಯವರ ಸಾಂಸ್ಕೃತಿಕ ವಿಶ್ಲೇಷಣೆ ಇಷ್ಟು ಸೂಕ್ಷ್ಮವಾಗಿ ನಡೆಯುವುದಕ್ಕೆ ಕಾರಣವೆಂದರೆ ಅವರ ಸಂಯೋಜಿತ ಜೀವನದೃಷ್ಟಿ ಮನುಷ್ಯ ಮತ್ತು ಅವನ ಪರಿಸರ ವನ್ನು ಅಭಿನ್ನವಾಗಿ ಇಡುವ ಈ ದೃಷ್ಟಿಗೆ ಅಂಥ ಚಿಂತನೆಯಿಂದ ಎರವಾದ ಸಂಸ್ಕೃತಿಯ ಅವಸಾನದ ಮೂಲಗಳು ಸ್ಪಷ್ಟವಾಗಿ ಗೋಚರಿಸುತ್ತವೆ.

"ಒಂದು ಸಸ್ಯ ಅವನತಿ ಹಾದಿ ಹಿಡೀತೂ ಅನ್ನಿ, ಅದರಿಂದ ಬದುಕುತ್ತಿದ್ದ ಕೀಟಸ್ತೋಮ, ಅವುಗಳನ್ನು ಆಹಾರ ಮಾಡಿಕೊಂಡಿದ್ದ ಪಕ್ಷಿಗಳು ಅವುಗಳಿಂದಲೇ ಬೀಜ ಪ್ರಸರಣವಾಗುತ್ತಿದ್ದ ವೃಕ್ಷ ಸಂಕುಲ, ಅದರ ಆಧಾರದ ಮೇಲೆ ಹೆಪ್ಪುಗಟ್ಟಿ ಮಳೆ ಸುರಿಸುವ ಮೋಡ ಮತ್ತು ಇವುಗಳೆಲ್ಲದರ ಆಧಾರದ ಮೇಲೆ ಬದುಕೋ ಮನುಷ್ಯ ಇಡೀ ವಿಶ್ವ ಇತರ ಒಂದಕ್ಕೊಂದಕ್ಕೆ ಬಿಗಿದುಕೊಂಡಿರೋ ಸಮತೋಲನದಲ್ಲಿ ನಿಂತಿರೋ ಬಲೆ. ಈ ರುದ್ರ ನಾಟಕದ ತೀರ್ಮಾನ ಆಗಿದ್ದು ಎಲ್ಲೋ ಯಾರಿಗೆ ಗೊತ್ತು. ಸುಲೇಮಾನ್ ಬೇರಿ ಕೈಲಿ ಲಂಚ ತಿಂದು ಕಾಡು ಮಾರಿ ಕೊಂಡ್ರಲ್ಲಾ ಆಗಲೇ ಇದ್ದರೂ ಇರಬಹುದು... (ಪು. 68)

ಸಮಾಜದ ಅವನತಿಯ ಚಿತ್ರಗಳನ್ನು ತೇಜಸ್ವಿಯವರ "ಅಬಚೂರಿನ ಪೋಸ್ಟಾಫೀಸು" ಸಂಕಲನದ ಕತೆಗಳಲ್ಲಿಯೂ ನೋಡುತ್ತೇವೆ. ಆದರೆ ಈ ಕಾದಂಬರಿಯಲ್ಲಿ ಬದುಕಿನ ಬಗ್ಗೆ ಇರುವ ಈ ಬಗೆಯ ಕಾಣ್ಕೆಯಿಂದಾಗಿ ಸಮಾಜದ ವಿಮರ್ಶೆ ಹೆಚ್ಚು ಆಳವೂ ಪ್ರಸ್ತುತವೂ ಆಗುತ್ತದೆ. ಇಂಥ ಒಂದು ಕಾಣ್ಕೆಯ ಬೆಂಬಲವಿಲ್ಲದಿದ್ದಲ್ಲಿ ಸಂಸ್ಕೃತಿಯ ಅವನತಿಯ ವಿಶ್ಲೇಷಣೆ ಕೇವಲ ಸಿನಿಕತನದ್ದು ಎನ್ನಿಸುವ ಸಾಧ್ಯತೆಗಳಿವೆ.

ಆದ್ದರಿಂದಲೇ ಅವರ ದೃಷ್ಟಿಯಲ್ಲಿ ಪರಿಸರದ ನಾಶ ಮತ್ತು ಸಮಾಜದ ಅವನತಿ ಇವೆರಡೂ ಬೇರೆ ಅಲ್ಲ. ಪಾಟೀಲರು ಹೇಳುವಂತೆ "ಕಿಸರೂರಿನ ಕಾಡು ಹಾಳಾಗಿದೆ, ತೋಟ ಹಾಳಾಗಿವೆ, ಸಮಾಜ ಹಾಳಾಗಿವೆ. ಮನುಷ್ಯರ ಚಿತ್ತಗಳೇ ಹಾಳಾಗಿವೆ, ಒಂದನ್ನು ಬಿಟ್ಟು ಇನ್ನೊಂದನ್ನು ಅಭ್ಯಾಸ ಮಾಡೋದಕ್ಕೆ ಆಗುತ್ತೇನ್ರಿ; ಎಲ್ಲಾ ಕುಸೀತಾ ಇದೆ...

ಕಾದಂಬರಿಯಲ್ಲಿ ಒಂದು ಸಂಗತಿ ಇನ್ನೊಂದರ ಜತೆಗೆ ಸೇರಿಕೊಳ್ಳುವುದು ಒಂದು ಸಂಗತಿ ಅನಿರೀಕ್ಷಿತವಾಗಿ ಇನ್ನೊಂದರ ಕಾರಣವಾಗುವದಕ್ಕೆ ಇದೇ ಕಾರಣ. ಯಾವುದೇ ಒಂದನ್ನು ಬೇರ್ಪಡಿಸಿ ನೋಡಲಿಕ್ಕಾಗುವದಲ್ಲ. ಸಮಗ್ರ ದೃಷ್ಟಿಯುಳ್ಳವರಿಗೆ ವಿರುದ್ಧವೆನ್ನಿಸುವ ಸಂಗತಿಗಳ ಮಧ್ಯೆಯೂ ಸಂಬಂಧಗಳು ಗೋಚರಿಸುತ್ತವೆ. ಕಾದಂಬರಿಯ ಬಂಧವೇ ಹೀಗೆ ನಮ್ಮನ್ನು ಎಲ್ಲ ಘಟನೆಗಳ ಮಧ್ಯದ ಕೊಂಡಿಗಳನ್ನು ಗುರುತಿಸಲು ಒತ್ತಾಯಿಸುತ್ತದೆ.

ಕಾದಂಬರಿಯ ಇನ್ನೊಂದು ಮುಖ್ಯ ಎಳೆ ಸಂಸ್ಕೃತಿಯ ಅವಸಾನ ಮನುಷ್ಯ ಸಂಬಂಧಗಳ ಮೇಲೆ ಮಾಡುವ ಪರಿಣಾಮ. ಈ ಸಂಬಂಧಗಳು ನಮ್ಮ ವ್ಯಕ್ತಿತ್ವಕ್ಕೆ ಮಾತ್ರ ಸಂಬಂಧಿಸಿದ, ಖಾಸಗಿಯಾದ ವಿಷಯಗಳು ಎಂದು ತೋರಿದರೂ ಕೂಡ ಸಮಾಜ ಮತ್ತು ಪರಿಸರದ ವಿಷ ಅವುಗಳನ್ನು ವಿಕೃತಗೊಳಿಸುತ್ತವೆ. ಕಾದಂಬರಿಯಲ್ಲಿ ಬರುವ ಗಂಡು ಹೆಣ್ಣಿನ ಮತ್ತು ಕೌಟುಂಬಿಕ ಸಂಬಂಧಗಳು ಇದನ್ನು ತೋರಿಸುತ್ತವೆ? ಕೃಷ್ಣೇಗೌಡನ ದಾಂಪತ್ಯ ಇಂಥ ಸಂಸ್ಕೃತಿಯ ಸಹಜ ಫಲವಾಗಿದೆ. ಈ ಸಂಬಂಧವಲ್ಲಿ ಕಾಣುವ ಅಸಹ್ಯ, ಕ್ರೌರ್ಯ, ನೋವುಗಳು ಅಲ್ಲಿರುವ ಪರಿಸರದಲ್ಲಿ ಅನಿವಾರ್ಯವಾಗಿವೆ. ಹದಿವಯಸ್ಸಿನ ಹುಡುಗ, ಹುಡುಗಿಯರ ಸಂಬಂಧಗಳೂ ಇದರಿಂದಾಗಿ ವಿಕೃತಗೊಂಡಿವೆ.

"ಮುದಿಯಾದ ಸಂಸ್ಕೃತಿಯ ಕೆಸರೂರಿನ ಮನೆ ಮನೆಯೊಳಗಿನ ಎಳೆಯ ತುಮುಲವಿರಬಹುದು ಇದು. ವಿವೇಕ ವಿವೇಚನೆಗಳನ್ನು ಎಳೆಯ ಜೀವಿಗಳಿಗೆ ಧಾರೆಯೆರೆದು ಅದರೊಂದಿಗೆ ಅವರು ವಿಕಾಸಗೊಳ್ಳಲು ಅನುವು ಮಾಡಿಕೊಡುವುದರ ಬದಲು ಶಾಸ್ತ್ರ ಆಚಾರದ ನೀತಿ ನಿಯಮಗಳ ಅದೃಶ್ಯ ಜಾಲದಲ್ಲಿ ಅವರನ್ನು ನಿಲುಕಿಸಿ ಅದಕ್ಕೆ ಅವರು ವಿಧೇಯರಾಗಿರುವಂತೆ ಮಾಡಲು ತಾವೂ ಅದನ್ನು ನಂಬಿ, ತಮ್ಮ ತಾರುಣ್ಯವನ್ನು ಹಾಳುಮಾಡಿಕೊಂಡ ಮುದಿಯರೆಲ್ಲಾ ಎಳೆ ಹೃದಯದೊಳಹೊಕ್ಕು ಪರಕಾಯ ಪ್ರವೇಶ ಮಾಡಲು ಹವಣಿಸುತ್ತಾ ಕೆಸರೂರನ್ನು ಒಂದು ಬೆಂತರಲೋಕ ಮಾಡಿದ್ದರು. ಜ್ವಾಲಾಮುಖಿಯೊಂದು ಒಳಗೆ ಭಯಂಕರ ಒತ್ತಡ ನಿರ್ಮಿಸುತ್ತಿತ್ತು." (ಪು. 178)

ಕೆಸರೂರಿನ ಸಂಸ್ಕೃತಿ ಸಮಾಜದ ವಾಸ್ತವಗಳಿಂದ ವಿಮುಖವಾಗುವಂತೆ ಮನುಷ್ಯನ ಸಹಜ ಪ್ರವೃತ್ತಿಗಳಿಂದಲೂ ವಿಮುಖವಾಗಿದೆ. ಆದ್ದರಿಂದಲೇ ಇಲ್ಲಿ ಆಚಾರಿಯ ಕಚ್ಚೆಹರುಕುತನ, ಕೃಷ್ಣೇಗೌಡನ ಲಂಪಟತನ ಮತ್ತು ಗೋಸಾಯಿ ಹೆಣ್ಣುಗಳ ಸೂಳೆಗಾರಿಕೆಗಳು ಸಹಜ ಸಂಬಂಧಗಳ ಸ್ಥಾನವನ್ನು ಆಕ್ರಮಿಸಿಕೊಂಡು ಬಿಟ್ಟಿವೆ. ಪರಸ್ಪರರ ಬಗ್ಗೆ ಹೆದರಿಕೆ, ಸಂಶಯ ಮತ್ತು ಕ್ರೌರ್ಯಗಳು ಸಮಾಜದಲ್ಲಿ ಸ್ವೀಕೃತವಾದ ಬಗೆಗಳಾಗಿ

ಬಿಟ್ಟಿವೆ. ಇಷ್ಟೆಲ್ಲ ಹೇಳಿದ ಮೇಲೆ ಸಮಾಜದ ಬದುಕಿನ ಬಗ್ಗೆ ಕಾದಂಬರಿ ತೀರ ನಿರಾಶಾದಾಯಕ ಚಿತ್ರವನ್ನು ಕೊಡುತ್ತದೆ ಎನ್ನಿಸಬಹುದು. ಆದರೆ ಕಾದಂಬರಿಕಾರರ ಸಮಗ್ರ ದೃಷ್ಟಿಯಲ್ಲಿ ಇಂಥ ಸುಲಭವಾದ ಸಿನಿಕತನಕ್ಕೆ ಸ್ಥಾನವಿಲ್ಲ. ನಮ್ಮ ಸುತ್ತಲೂ ಇರುವ ಕೆಡುಕನ್ನು ಯಾವ ವಿವಂಚನೆಯೂ ಇಲ್ಲದೇ ಶೋಧಿಸುವಾಗಲೂ, ರೋಗಗ್ರಸ್ತ ಸಮಾಜದ ಗರ್ಭದಲ್ಲಿ ಹೊಸದೊಂದು ಬದುಕು ಹುಟ್ಟುವ ಸಾಧ್ಯತೆಗಳನ್ನು ತೇಜಸ್ವಿ ಗುರುತಿಸುತ್ತಾರೆ. ಆದ್ದರಿಂದಲೇ ಲಂಟಾನಾ ಒಂದು ಸಮರ್ಥ ರೂಪಕವಾಗಿದೆ. ನಿರಂತರ ಪ್ರಯೋಗಶೀಲತೆಯಿಂದ ಮನುಷ್ಯನ ದೌರ್ಜನ್ಯದ ವಿರುದ್ಧ ನಿಸರ್ಗ ತನ್ನನ್ನು ಸಂರಕ್ಷಿಸಿಕೊಳ್ಳುತ್ತದೆ. ಅದರ ಅದಮ್ಯತೆಗೆ ಕೊನೆಯೇ ಇಲ್ಲ. ಪಾಟೀಲರು ಹೇಳುವಂತೆ ಲಂಟಾನಾ ಕೂಡ ಬೆಟ್ಟಗಳಿಂದ ಮಣ್ಣು ಜರಿದುಹೋಗದಂತೆ ಹಿಡಿದು ನಿಲ್ಲಿಸುತ್ತದೆ. ಎಷ್ಟೋ ವರ್ಷಗಳ ನಂತರ ಅಲ್ಲಿ ಮತ್ತೆ ಹಸಿರಾದ ಕಾಡು ಹುಟ್ಟಬಹುದು. ನಿಸರ್ಗಕ್ಕೆ ಇರುವಂತೆಯೇ ಮನುಷ್ಯನ ಚೇತನಕ್ಕೂ ಪುನರ್ಜನ್ಮದ ಸಾಧ್ಯತೆ ಇದೆ. ಈ ಸಾಧ್ಯತೆಗಳನ್ನು ತೇಜಸ್ವಿ ಸೂಚಿಸುವುದು ಸಮಾಜ ಪರಿಸರದ ಮಾಲಿನ್ಯದಿಂದ ಸ್ವಲ್ಪ ಮಟ್ಟಿಗ ಮುಕ್ತರಾದ ಹದಿವಯಸ್ಸಿನ ಯುವಕ ಯುವತಿಯರಲ್ಲಿ. ಜಡ್ಡುಗಟ್ಟಿದ ಸಮಾಜದ ದೇಣಿಗೆಯಾದ ಭ್ರಾಮಕ ಲೋಕದಿಂದ ಹೊರಬಂದು ಪ್ರೇಮದ ಸ್ಪರ್ಶವನ್ನು ಕಂಡುಕೊಂಡಾಗ ಮತ್ತೆ ಹೊಸ ಬದುಕಿನತ್ತ ಅವರು ಹೆಜ್ಜೆ ಇಡುತ್ತಾರೆ.

ಜಯಂತಿ ಗಿರ್ರನೆ ತಿರುಗುವ ಅಗ್ನಿಗೋಲವಾದಳು. ವಯಸ್ಸಿನ ಉನ್ನತ ಪರಿಭ್ರಮಣೆಯ ವೇಗದಲ್ಲಿ ಕಿಡಿಗಳು ಕೇಂದ್ರದಿಂದ ಕಳಚಿ ದೂರ ಹಾರುವಂತೆ ಜಾತಿ, ಮನೆತನ ಕುಟುಂಬ ಹೆಸರುಗಳೆಲ್ಲಾ ಕಳಚಿ ಒಯ್ಯನೆ ದೂರ ಹಾರಿದವು. ಅವಳಿಗೆ ತನಗೆ ಕೈಕಾಲುಗಳೆಲ್ಲವೂ ಎಂದು ದಿಗಿಲಾಯ್ತು....(ಪು. 213)

ಹದಿವಯಸ್ಸಿನ ಭ್ರಾಮಕತೆಯಲ್ಲಿಯೇ ಹುಟ್ಟಿದರೂ ಕೂಡ ಸಹಜತೆಯ ಸೋಂಕಿನಿಂದ ರಫಿ ಮತ್ತು ಜಯಂತಿಯ ಸಂಬಂಧ ಹೊಸ ಬದುಕಿನತ್ತ ಬೆರಳುಮಾಡಿ ತೋರಿಸುವಷ್ಟು ಸಮರ್ಥವಾಗಿದೆ. ಕಾದಂಬರಿಯ ಕೊನೆಗೆ ಅವರಿಬ್ಬರೂ ಆ್ಯಡಂ ಮತ್ತು ಈವ್‌ರಂತೆ ಹಾಗೆ ಬೆತ್ತಲೆಯಾಗಿ ನಾಶವಾಗುತ್ತಿರುವ ಕೆಸರೂರಿನಿಂದ ದೂರದಲ್ಲಿ ನಿಂತು 'ಪುನರ್ಜನ್ಮ' ಪಡೆದುಕೊಳ್ಳುತ್ತಾರೆ. ಅವರಲ್ಲಿಯ ಜೀವನ್ಮೋಖತೆ ಸಂಸ್ಕೃತಿಯೊಂದರ ಅವಸಾನದ ನಂತರವೂ ಉಳಿಯಬಲ್ಲದು ಎನ್ನುವ ಸೂಚನೆ ಕೆಸರೂರನ್ನು ಮುಸುಕಿದ ವಿಷದ ಹೊಗೆಯ ಮಧ್ಯೆ ಹೊಳೆಯುವ ಕಾದಂಬರಿಯ ಕೊನೆಯ ಕಾಣ್ಕೆಯಲ್ಲಿದೆ.

# ಒಬ್ಬಳಿದ್ದಳು

ತುಟಿಯಲ್ಲಿ ಹೂವೆಲೆಯ ಹನಿ ಬಳಕು
ಕಣ್ಣು ತುಂಬ ಸಮುದ್ರ ಜೀವ ತುಳುಕು
ಕಾರ್ತಿಕ ಕತ್ತಲೆಯ
ಪುಟ್ಟ ಹಣತೆ –
ಕುಡಿ
ತೆಳು ಬೆಳಕು
ಹಲವು ಒಲವ
ಕನಸು ಕವಿತೆಗಳ
ಬಿತ್ತಿದ್ದಳು ಒಬ್ಬಳಿದ್ದಳು.

ಅಪ್ಪಿ ಮುತ್ತಿಟ್ಟು
ಅಲೆ ಅಲೆ
ಹಾಲಕ್ಕಿ ಹಿಂಡು ನಗೆಯು
ನನ್ನೆದೆಗೆ
ಹಾರಿಬಿಟ್ಟು

ಕಣ್ಣು ರೆಪ್ಪೆ
ಬೆಚ್ಚಗೆ ಹೊಚ್ಚಿ
ಬಚ್ಚಿಟ್ಟಿದ್ದಳು - ಒಬ್ಬಳಿದ್ದಳು.

ಕಣ್ಣಲ್ಲಿ ಕುಳಿತು ಹಾಡಿದಳು
ಕತ್ತಲಲ್ಲಿ ಕೈಹಿಡಿದು ನಡೆಸಿದಳು
ಮಲ್ಲಿಗೆ ಅಂಟ
ಗಮ ಗಮ ನಂಟಿ ಹಚ್ಚಿ

ನೀರಂತೆ ಹೋಳು ಹೋಳಾಗಿ
ಹರಿದು ಹೋದಳು

ಸತೀಶ ಕುಲಕರ್ಣಿ, ಕೆ.ಇ.ಬಿ., ಹಾವೇರಿ, 581110, ಧಾರವಾಡ ಜಿಲ್ಲೆ.

ಹರಿಯದ ಹಂದರ, ಬಳ್ಳಿ
ನೆಲಕ್ಕೆ ಚೆಲ್ಲಿ

ಬಾಡಿದ ಹೂವುಗಳ
ಗಾಳಿಗೆ ಸುರವಿ - ಹೋದಳು
ಒಬ್ಬಳಿದ್ದಳು.

ನಿದ್ದೆಗಣ್ಣ
ನಡುರಾತ್ರಿ ನಿಬ್ಬಣದಂತೆ
ನಡೆದು ಹೋದಳು
ಸಾಲು ಸಾಲು
ಕುರುಡು ಸಂಪತ್ತುಗಳ
ನೀಡಿಹೋದಳು - ಒಬ್ಬಳಿದ್ದಳು.

ಕುರುಡುಗಾಳಿ
ಬೆಳಕ ಗೋರಿ
ಮೂಕ ಕವಿತೆ

ಇಷ್ಟು ಬರಿ ಇಷ್ಟು
ನನ್ನ ಪುಟ್ಟ ಜಗತ್ತಿನ ಕಣ್ಣುಗಳಷ್ಟು
ಕಿತ್ತು ಹೋದಳು
ಒಬ್ಬಳಿದ್ದಳು ಒಬ್ಬಳಿದ್ದಳು
ನನ್ನವಳೊಬ್ಬಳಿದ್ದಳು.

—ಸತೀಶ್ ಕುಲಕರ್ಣಿ

---

ಜಿ. ವಿ. ಆನಂದಮೂರ್ತಿ, 'ಶೇಲಿ', ಹಳೆ ಕೆನರಾಬ್ಯಾಂಕ್, ರಾಯರಕೊಪ್ಪಲು-573139

## ಗಾಳಿಯು ಜೋಡಿ

ಸಿಂತ ನೆಲದಿಂದ ಬಣ್ಣ ಬಡಿವಾರ ಕಳಚಿಹಾಕಿ
ಸುತ್ತಿಗೆ ಹಾಕುವ ಪಟ್ಟದರಸುಗಳ ಮೆಟ್ಟಿ
ಕಚ್ಚು ಮಥೆ ಕಿಚ್ಚಿನೊಳಗಿಂದ ಚಿಮ್ಮಿ
ನೆಗೀ ನೀನು ಮುಗಿಲ ಕಡೆಗೆ ಗಾಳಿಯು ಜೋಡಿ.

ಕತ್ತಿ ಹಿಡಿದವರು ಸುತ್ತುವರಕೊಂಡು ಬರುವಾಗ
ಎರಗ್ಯಾವು ಹದ್ದುಗಳ ದಂಡು ಜಗದೊಳಗೆ
ಬೆಳೆಗಳನ್ನ ಮುಕ್ಕಿ ಬಳಗಗಳನ್ನೆಲ್ಲಾ ಮುರಿಯುವರು
ನೆಗೀ ನೀನು ಮುಗಿಲಕಡೆಗೆ ಗಾಳಿಯು ಜೋಡಿ.

ರಥಕುದುರೆ ಬೆಳುಗೊಡೆ ಎಷ್ಟೋ ಮುಳುಗಿ ಧರಣಿಯೊಳಗೆ
ಗ್ರಾಮ ಪಟ್ಟಣವಾಗಿ ಉಪ್ಪರಿಗೆಗಳ ತಳ ಕುಸಿದು
ಲೋಕದಾಟವು ನಿನ್ನ ಕಣ್ಣ ತುಂಬಲಿ ಬೇಡ
ನೆಗೀ ನೀನು ಮುಗಿಲ ಕಡೆಗೆ ಗಾಳಿಯು ಜೋಡಿ.

—ಜಿ. ವಿ. ಆನಂದಮೂರ್ತಿ

---

ಆನಂದಮೂರ್ತಿಯವರ ವಿಳಾಸ 16ನೆಯ ಪುಟದಲ್ಲಿ ಆಕಸ್ಮಿಕವಾಗಿ ಪ್ರಕಟವಾಗಿದೆ.
ದಯವಿಟ್ಟು ಕ್ಷಮಿಸಿ.

# ತ.ರಾ.ಸು : ಒಂದು ನೆನಪು

—ಬಂದಗದ್ದೆ ರಾಧಾಕೃಷ್ಣ

ತ.ರಾ.ಸು.—ಹೆಸರು ನನ್ನ ಗಮನಕ್ಕೆ ಬಂದಿದ್ದು ಚಿಕ್ಕಂದಿನಲ್ಲಿ. ಚಿಕ್ಕಂದಿನಲ್ಲಿ ಎಂದರೆ ಕರಾರುವಾಕ್ಕು ವಯಸ್ಸು ಈಗ ನೆನಪಿಲ್ಲ. ಆ ಹೊತ್ತಿಗೆ ಕನ್ನಡ ಅಕ್ಷರಗಳನ್ನು ನಾನು ಓದಬಲ್ಲವನಾಗಿದ್ದೆ ಎಂಬುದು ನಿಕ್ಕಿ. ಈ ಹೆಸರು ನನ್ನ ಗಮನ ಸೆಳೆದ ರೀತಿ ನನ್ನ ಮಟ್ಟಿಗೆ ಸ್ವಾರಸ್ಯವಾಗಿದೆ. ಸಾಗರದಿಂದ ಜೋಗಕ್ಕೆ ಹೋಗುವ ದಾರಿಯಲ್ಲಿ ಏಳು ಕಿಲೋಮೀಟರು ಸಾಗಿದರೆ ಶಿರೂರು ಎಂಬ ಹಳ್ಳಿ ನನ್ನ ಸೋದರಮಾವನ ಮನೆ. ಪಶ್ಚಿಮಘಟ್ಟದ ತಪ್ಪಲಲ್ಲಿ ಒಂಟಿ ಮನೆ ಅದು. ನನ್ನ ಅತ್ತೆ ಕಾದಂಬರೀಪ್ರಿಯೆ. ಅವಳ ಹಾಸಿಗೆಯ ಮಗ್ಗುಲಲ್ಲಿ ಯಾವಾಗಲೂ ಕಾದಂಬರಿಗಳು, ಇರುತ್ತಿದ್ದವು. ಅವರ ಮನೆಗೆ ಹೋದಾಗ ಆ ಪುಸ್ತಕಗಳ ಮುಖಪುಟದ ಚಿತ್ರಗಳನ್ನೆಲ್ಲ ನೋಡಿ ಖುಷಿಪಡುತ್ತಿದ್ದೆ. ಪುಸ್ತಕದ ಹೆಸರೇನು, ಯಾರು ಬರೆದದ್ದು, ಮುಂತಾದ್ದರ ಗೊಡವೆ ಆಗ ಇರಲಿಲ್ಲ. ಅಂತಹ ಸಂದರ್ಭದಲ್ಲಿ ಕೂಡಾ ತಾ.ರಾ.ಸು. ಎಂಬ ಮೂರಕ್ಷರ ನನ್ನ ಗಮನ ಸೆಳೆಯಿತು.

ಪುಸ್ತಕದ ಮುಖಪುಟ ನೋಡುವಾಗ ನನ್ನ ಅತ್ತೆ, ಅತ್ತಿಗೆ ಭಾವಂದಿರೆಲ್ಲ ಅಕ್ಕಪಕ್ಕ ಇದ್ದರು. ನಮ್ಮ ಹಳ್ಳಿಗಳಲ್ಲಿರುವ ಅಕ್ಷರ ಬಾರದ ವೈತಾಪಿ ಜನರು ಮಾತಾಡುವಾಗ ತ್ರಾಸು–ಕಷ್ಟ ಎಂಬ ಪದವನ್ನು ತರಾಸು ಎಂದು ಹೇಳುತ್ತಿದ್ದರು. ಉದಾಹರಣೆಗೆ "ಮಳೆಗಾಲದಲ್ಲಿ ಆ ರಸ್ತೆಯಲ್ಲಿ ಓಡಾಡುವುದು ತ್ರಾಸು" ಎಂದಿದ್ದರೆ ಅದು ಅವರ ಬಾಯಲ್ಲಿ "ಮಳೆಗಾಲ್ದಾಗೆ ಆ ರಸ್ತೇಲಿ ಓಡಾಡಾದು ತರಾಸಾಗತೈತಿ" ಎಂದಾಗುತ್ತದೆ. ನನ್ನ ಸುತ್ತ ಕುಳಿತು ಮಾತಾಡುತ್ತಿದ್ದವರೆದುರು ತ್ರಾಸು–ತರಾಸು ಎಂಬರ್ಥದಲ್ಲಿ ಕಾದಂಬರಿಯ ಮುಖಪುಟದ ಮೇಲಿದ್ದ ಅಕ್ಷರಗಳನ್ನು ತೋರಿಸಿ "ಇದೆಂತಾ ಹೆಸರು ಅತ್ತೆ ತ.ರಾ.ಸು. ಹಾಳಾ ತರಾಸಾಗತೈತಿ"–ಎನ್ನುತ್ತ ನಕ್ಕುಬಿಟ್ಟೆ. ಮುಂದೊಂದು ದಿನ ಈ ಕಾದಂಬರಿಕಾರನೊಡನೆ ತಿಂಗಳುಗಟ್ಟಲೆ ಕಳೆಯುವ ದಿನಗಳು ಬರುತ್ತವೆ ಎಂದು ನಾನು ಊಹಿಸಿರಲೇ ಇಲ್ಲ. ಅಂದು ನನ್ನ ಹಾಸ್ಯಕ್ಕೆ ಎಲ್ಲರೂ ನಕ್ಕರು.—ಇದು ತ.ರಾ.ಸು. ಹೆಸರು ನನ್ನ ಗಮನ ಸೆಳೆದ ರೀತಿ.

---

ಬಂದಗದ್ದೆ ರಾಧಾಕೃಷ್ಣ, ಬಂದಗದ್ದೆ, ಕೆಳದಿ ಅಂಚೆ, ಸಾಗರ (ತಾ), ಶಿವಮೊಗ್ಗ ಜಿಲ್ಲೆ.

ತ.ರಾ.ಸು, ಕನ್ನಡದ ಕಾದಂಬರೀಕಾರ, ಇವರ ಹೆಸರು ತ. ರಾ. ಸುಬ್ಬರಾಯ ಎಂಬುದೆಲ್ಲಾ ನನಗೆ ಗೊತ್ತಾಗಿದ್ದು ಪ್ರೌಢಶಾಲೆ ಓದುವಾಗ ತ.ರಾ.ಸು. ಜೊತೆ ಅನಕೃ ಹೆಸರು ಸೇರಿಕೊಂಡತೆಯೇ ಇತ್ತು. ನಮ್ಮ ಕಡೆ ಇವರಿಬ್ಬರೂ ಅಶ್ಲೀಲವಾಗಿ ಬರೆಯುತ್ತಾರೆ, ಸೂಳೆಗಾರಿಕೆ ಮಾಡುತ್ತಾರೆ, ಸಿಗರೇಟು ಹೆಂಡದೊಳಗೇ ಮುಳುಗಿರುತ್ತಾರೆ ಎಂದು ಸಾಹಿತ್ಯದ ಬಗೆಗೆ ಮಾತಾಡುವ ಮಂದಿ ಹೇಳುತ್ತಿದ್ದರು. ಆಗ ಎಲ್ಲಿ ನೋಡಿದರೂ ಇವರ ಪುಸ್ತಕಗಳು ಇರುತ್ತಿದ್ದರಿಂದ ಇವರು ಯಾವ ರೀತಿಯ ಮನುಷ್ಯರಿರಬಹುದು ಎಂಬ ಕುತೂಹಲವೂ ಇತ್ತು.

ಚಿಕ್ಕಂದಿನಲ್ಲಿ ಪ್ರಾಸವಿರುವ ಪದ್ಯಗಳನ್ನು ಓದಿ ಖುಷಿ ಪಡುತ್ತಿದ್ದ ನನಗೆ ಗದ್ಯದಲ್ಲೂ ಒಂದು ರೀತಿಯ ಖುಷಿ, ರುಚಿ ಇದೆ ಎಂದು ಅನಿಸಿದ್ದು ಸುಬ್ಬರಾಯರ ಬರಹದ ಶೈಲಿಯಿಂದ.

1978 ರಿಂದ 80 ರವರೆಗೆ ಮಲ್ಲಾಡಿಹಳ್ಳಿಯ ಜೂನಿಯರ್ ಕಾಲೇಜಿನಲ್ಲಿ ಪಿ.ಯು.ಸಿ. ಓದಿದೆ. ಆಗ ತ.ರಾ.ಸು. ಅವರ "ಸಿಡಿಲಮೊಗ್ಗು" ಕಾದಂಬರಿ ನಮಗೆ ಪಠ್ಯಪುಸ್ತಕವಾಗಿತ್ತು. ಅವರ ರೋಚಕ ಶೈಲಿ, ಪ್ರಕೃತಿ ವರ್ಣನೆ, ಸಂಭಾಷಣೆಯ ವೈಖರಿ ನನಗೆ ಪ್ರಿಯವಾಗಿತ್ತು. ಒಂದು ಕಾದಂಬರಿಯಾಗಲಿ, ಅಥವಾ ಯಾವುದೇ ಕೃತಿಯನ್ನಾಗಲಿ ಓದಬೇಕೆಂದು ಮನದಟ್ಟು ಮಾಡಿದ ಮೇಸ್ಟ್ರು ಜೆ. ಎಲ್. ರಾಮಪ್ಪನವರು ತ.ರಾ.ಸು. ಬರವಣಿಗೆ ಎಲ್ಲಿ ಎಡುವುತ್ತದೆ ಎಡವಲು ಕಾರಣಗಳೇನು ಎಂಬುವನ್ನು ಹೇಳುತ್ತಿದ್ದರು. ತ.ರಾ.ಸು. ಬರೆಯುವಾಗ ಭಾವುಕರಾಗುತ್ತಾರೆ ಎಂಬುದನ್ನು ಒಪ್ಪಿಕೊಂಡರೂ ಅವರ ಬರಹದ ಶೈಲಿಗೆ ನನ್ನ ಮರುಮಾತಿಲ್ಲ. ಅವರ ಬರಹಕ್ಕೆ ಹೆಸರು ನಮೂದಿಸದೇ ಇದ್ದರೂ ಇದು ತ.ರಾ.ಸು. ಅವರೇ ಬರೆದದ್ದು ಎಂದು ಹೇಳಬಹುದಾದಷ್ಟು ನಿಖರತೆ ಇದೆ.

ನಮ್ಮ ಹಾಸ್ಟಲ್ ಬಳಿ ಇದ್ದ ಗೆಸ್ಟ್‌ಹೌಸ್ ಬಳಿ ತ.ರಾ.ಸು. ಇರುತ್ತಾ ಒಂದು ತಿಂಗಳಾಯಿತು. ಎಂದು ಪರಿಚಯದ ಹೈಸ್ಕೂಲ್ ಹುಡುಗನೊಬ್ಬ ಹೇಳಿದಾಗ ನನಗೆ ಆಶ್ಚರ್ಯವಾಯಿತು. ಇಷ್ಟು ದಿನದವರೆಗೂ ಈ ಮನುಷ್ಯ ಹೊರಗೆ ಕಾಣಿಸಿಕೊಳ್ಳುವುದೇ ಇಲ್ಲವಲ್ಲ ಎಂದು. ಅವರ ಕಾದಂಬರಿ ನಮಗೆ ಪಠ್ಯಪುಸ್ತಕವಾಗಿದ್ದಲ್ಲದೆ ಕನ್ನಡದ ಪ್ರಸಿದ್ಧ ಕಾದಂಬರೀಕಾರ ಅನ್ನುವ ಹೆಸರುಳ್ಳ ಮನುಷ್ಯ ನಮ್ಮ ಹಾಸ್ಟಲ್ ಬಳಿಯೇ ಇದ್ದಾರೆಂದರೆ ಅವರನ್ನು ಕಂಡು ಮಾತಾಡೋಣ ಅನಿಸಿತು. ಆಗ ನಾನು ಚಿಕ್ಕಂದಿನಲ್ಲಿ ಅವರ ಹೆಸರಿನ ಬಗೆಗೆ ಮಾಡಿದ ಹಾಸ್ಯ ನೆನಪಾಯಿತು.

ನನ್ನ ಮಿತ್ರ ಮತ್ತು ಸಹಪಾಠಿ ಆಗಿದ್ದ ಮೈಸೂರಿನ ಹುಡುಗ ಸಿಂದುವಳ್ಳಿ ರವಿಶಂಕರ "ನನಗೆ ಅವರ ಪರಿಚಯವಿದೆ ಬಾ. ಹೋಗೋಣ" ಎಂದ. ಇಬ್ಬರೂ

ಅವರನ್ನು ನೋಡಲು ರಾತ್ರಿ ೮ ಗಂಟೆಗೆ ಗೆಸ್ಟ್‌ಹೌಸಿಗೆ ಹೋದೆವು. ತರಾಸು ಒಬ್ಬರೇ ಊಟ ಮಾಡುತ್ತ ಕುಳಿತಿದ್ದರು. ಅನ್ನ. ಸಾರು, ಪಲ್ಯ ಮುಗಿತಾದವಲ್ಲ. ಬರೀ ಬ್ರೆಡ್ಡು, ಜಾಮು, ಬೆಣ್ಣೆ ಪ್ರೀತಿಯಿಂದ ಹುಡುಗರಾದ ನಮ್ಮೊಡನೆ ಮಾತಾಡಿದರು. ಗೆಸ್ಟ್ ಹೌಸ್‌ನಿಂದ ಹೊರಗೆ ಬರುವಾಗ ಕೂಡ ನಾನು ಅವರ ಹೆಸರಿನ ಬಗೆಗೆ ಮಾಡಿನ ಹಾಸ್ಯ ನನ್ನನ್ನು ಹಾಸ್ಯ ಮಾಡುತ್ತಿತ್ತು !

ಪಿ.ಯು.ಸಿ. ಮುಗಿಸಿ ನಂತರ ಚಿತ್ರದುರ್ಗದಲ್ಲಿ ಬಿ.ಎ. ಓದಲು ಇದ್ದೆ. ಡಿಗ್ರಿಯ ಎರಡು ವರ್ಷಗಳು ಮುಗಿದು ಕೊನೆಯ ವರ್ಷದ ದಸರಾ ರಜೆ ಸಮೀಪಿಸುವುದರಲ್ಲಿತ್ತು (ಸೆಪ್ಟೆಂಬರ್-1983) ಒಮ್ಮೆ ಪಾಠದ ವಿಷಯದ ಸಲುವಾಗಿ ನನಗೆ ಕನ್ನಡ ಉಪನ್ಯಾಸಕ ರಾಗಿದ್ದ ಶ್ರೀ ಶ್ರೀಶೈಲ ಆರಾಧ್ಯರ ಮನೆಗೆ ಬೆಳಗಿನ ಹೊತ್ತು ಹೋದೆ. ಆಗ ಅವರಿಗೆ ಬಿಡುವಿಲ್ಲದ ಕಾರಣ ಗೊತ್ತಾಗಿದ್ದರಿಂದ "ಸಂಜೆ ಮನೆಯಲ್ಲಿರುತ್ತೀರಾ ?"— ಎಂದೆ. ತ.ರಾ.ಸು. ಬಂದು ಕೆಲವು ದಿನಗಳಾಯಿತು. ಸಂಜೆ ಅವರಲ್ಲಿಗೆ ಹೋಗಬೇಕು ಎಂದರು. ನನ್ನ ಮುಖದಲ್ಲಿ ಆಶ್ಚರ್ಯ ವ್ಯಕ್ತವಾಗಿದ್ದನ್ನು ಗಮನಿಸಿದ ಆರಾಧ್ಯರು "ನೀನೂ ಬಾ. ಹೋಗೋಣ" ಎಂದರು.

ಸಂಜೆ ನಾವು ಆರಾಧ್ಯರ ಮನೆಯಿಂದ ಹೊರಡುವುದಕ್ಕೂ ಇಪ್ಪತ್ತು ವರ್ಷದ ಒಬ್ಬ ಹುಡುಗ "ಏನು ಆರಾಧ್ಯರೇ, ಎತ್ತ ಹೊರಟಿದ್ದೀರಿ ?"— ಎನ್ನುತ್ತ ಒಳಬಂದು ನನ್ನ ಪಕ್ಕದ ಕುರ್ಚಿಯಲ್ಲೇ ಕುಳಿತ. ಆರಾಧ್ಯರೊಡನೆ ಬಹಳ ಸಲಿಗೆಯಿಂದ, ತಮಾಷೆ ಯಾಗಿ ಮಾತಾಡಿದ್ದನ್ನು ಕಂಡು ಈತ ಯಾರಿರಬಹುದು ಎಂದು ಯೋಚಿಸುತ್ತಿರು ವಾಗಲೇ" ಇವನು ತ.ರಾ.ಸು. ಅವರ ಮಗ ಪ್ರದೀಪಕುಮಾರ ಅಂತ"— ಎಂದು ಆರಾಧ್ಯರು ಪರಿಚಯ ಮಾಡಿಸಿದರು. ನಂತರ ಅವರ ಮನೆಗೇ ಹೊರಟ ವಿಷಯ ಹೇಳಿ ಮೂವರೂ ರಿಕ್ಷಾದಲ್ಲಿ ಹೋದೆವು.

ಚಿತ್ರದುರ್ಗದ ಜೆ. ಸಿ. ಆರ್. ಬಡಾವಣೆಯಲ್ಲಿ ಸುಬ್ಬರಾಯರ ತಂಗಿ ಕಮಲಮ್ಮ ಅವರ ಮನೆಯಿತ್ತು. ವಿಧವೆಯಾಗಿದ್ದ ಅವರು ಪ್ರಾಥಮಿಕ ಶಾಲಾ ಶಿಕ್ಷಕಿಯಾಗಿ ಕೆಲಸ ಮಾಡಿ ನಿವೃತ್ತಿಯಾಗಿದ್ದರು. ಹಾಲಿ ತರಾಸು ತಂಗಿಯ ಮನೆಯಲ್ಲಿದ್ದರು. ಅನಾ ರೋಗ್ಯದಿಂದ ಬಳಲಿ ಕೃಷವಾದ ಶರೀರ, ದೊಗಳೆ ಪೈಜಾಮ ಜುಬ್ಬ. ಕೆಂಡದುಂಡೆ ಯಂತ ಕಣ್ಣುಗಳು, (ಸುಬ್ಬರಾಯರಿಗೆ ಬಹಳ ಸಿಟ್ಟು ಎಂದು ಕೇಳಿದ್ದೆ) ಆರಾಧ್ಯರು ನನ್ನನ್ನು ಅವರಿಗೆ ಪರಿಚಯಿಸಿದರು. ಸಿಗರೇಟು ಸೇದುತ್ತಿದ್ದ ಸುಬ್ಬರಾಯರು ಮುಗುಳ್ನಕ್ಕು ಮಾತಾಡಿಸಿದರು. ಅಂದಿನಿಂದ ಪ್ರತಿ ದಿನ ಸಂಜೆ ಅವರನ್ನು ಭೇಟಿ

ಆಗಲು ಬಲವಾದ ಕಾರಣವೊಂದು ಕಾದು ಕುಳಿತಿತ್ತು. ಅದು ಇತಿಹಾಸದಲ್ಲಿ ಅಪಾರ ಆಸಕ್ತಿ ಹೊಂದಿದ್ದ ಸುಬ್ಬರಾಯರಿಗೆ ಆರಾಧ್ಯರಿಂದ ಸಂಶೋಧನೆಯಾದ ವಿಷಯದ ಬಗೆಗೆ ಒಂದು ಪುಸ್ತಕ ಬರೆಸುವುದು.

ತ.ರಾ.ಸು. ಚಿತ್ರದುರ್ಗಕ್ಕೆ ಬರುವ ಮೊದಲೇ "ದುರ್ಗಾಸ್ತಮಾನ" ಕಾದಂಬರಿ ಬರೆದಾಗಿತ್ತು. ಅದು ಚಿತ್ರದುರ್ಗದ ಕೊನೆಯ ಪಾಳೇಗಾರನಾದ ಮದಕರಿನಾಯಕನ ಬಗೆಗೆ ಬರೆದ ಕಾದಂಬರಿ ಗಾತ್ರದಲ್ಲಿ ದೊಡ್ಡದಾಗಿದ್ದರಿಂದ ಮುದ್ರಣಕಾರ್ಯ ಹೆಚ್ಚು ದಿನಗಳನ್ನು ತೆಗೆದುಕೊಳ್ಳುತ್ತಿತ್ತು. ಮುದ್ರಣವಾದ ಪುಟಗಳನ್ನೆಲ್ಲ ಅಂಚೆಯ ಮೂಲಕ ತ.ರಾ.ಸು. ಅವರಿಗೆ ಕಳಿಸಲಾಗುತ್ತಿತ್ತು. ಒಂದು ದಿನ ಸಂಜೆ ಐದೂವರೆ ಗಂಟೆಗೆ ಅವರ ಮನೆಗೆ ಹೋಗಿದ್ದೆ. ಪ್ರದೀಪಕುಮಾರ (ತ.ರಾ.ಸು. ಅವನನ್ನು "ಪದ್ದಿ" ಎಂದು ಕರೆಯುತ್ತಿದ್ದರು) ಪೇಟೆಗೆ ಹೋಗಿದ್ದ. ಆರಾಧ್ಯರು ಇನ್ನೂ ಬಂದಿರಲಿಲ್ಲ. ಸುಬ್ಬರಾಯರು ಯಾವುದೋ ಪುಸ್ತಕದಲ್ಲಿ ಮುಳುಗಿದ್ದರು. ಮೇಜಿನ ಮೇಲಿದ್ದ ಕಾದಂಬರಿಯ ಒಂದಷ್ಟು ಬಿಡಿಪುಟಗಳನ್ನು ಓದತೊಡಗಿದೆ. ಸೂರ್ಯ ಪಶ್ಚಿಮದ ಬಾನಂಚಿಗೆ ಇಳಿಯುತ್ತಿದ್ದ. ಆಗ ನಾನು ಜಾನಕಲ್ಲಿನಿಂದ ಮದಕರಿನಾಯಕ ಚಿತ್ರದುರ್ಗದ ಅರಮನೆಗೆ ಅರಸನಾಗಲು ಮೆರವಣಿಗೆಯಲ್ಲಿ ಬರುತ್ತಿರುವ ಭಾಗವನ್ನು ಓದುತ್ತಿದ್ದೆ. ಹೀಗೆ ಬರುತ್ತಿರುವ ಮೆರವಣಿಗೆಯ ಸುದ್ದಿಯನ್ನು ಕೇಳಿ ದುರ್ಗದ ಜನ ಕೆಣಕಿದ ಜೇನು ಹುಟ್ಟಿನಂತೆ ಆದರು ಎಂದು ಅವರು ಬರೆದಿದ್ದು ನನ್ನ ಮನಸ್ಸಿಗೆ ಒಪ್ಪಲಿಲ್ಲ. ತಮ್ಮ ಅರಸನಾಗಿ ಬರುವ ಮದಕರಿನಾಯಕನ ಮೆರವಣಿಗೆಯನ್ನು ಸಂತೋಷದಿಂದ ಪಾಲ್ಗೊಳ್ಳಲು ಎದುರಾಗುತ್ತಿರುವ ಜನರಿಗೆ "ಕೆಣಕಿದ ಜೇನು ಹುಟ್ಟಿನಂತೆ" ಎಂದರೆ ಸಿಟ್ಟಿನಿಂದ, ಕ್ರೋಧದಿಂದ ಎಂದಾಗುತ್ತದೆಯಲ್ಲವೇ? ಎಂದು ಅವರನ್ನು ಕೇಳಬೇಕೆಂದು ಮೂರು-ನಾಲ್ಕು ಬಾರಿ ಅಂದುಕೊಂಡೆ. ಆದರೆ ಹೇಳಲು ಧೈರ್ಯ ಸಾಕಾಗಲಿಲ್ಲ. ಈ ಪೋರ ನನ್ನ ಪುಸ್ತಕದ ತಪ್ಪುಗಳನ್ನು ಹುಡುಕಿ ನನಗೇ ಹೇಳುತ್ತಾನಲ್ಲಾ ಎಂದುಕೊಳ್ಳುವರೋ ಏನೋ ಅನಿಸಿತು. ಆದರೆ ಈಗಾಗಲೇ ಅವರ ಸಹವಾಸ ಮಾಡಿ ಬಹುದಿನಗಳಾಗಿದ್ದರಿಂದ ಸುಬ್ಬರಾಯರು ಅಂಥವರಲ್ಲ ಅಂದುಕೊಂಡಿದ್ದೆ. ಕೊನೆಗೊಮ್ಮೆ ಧೈರ್ಯಮಾಡಿ ಹೇಳಿಯೇ ಬಿಟ್ಟೆ. ಓದುತ್ತಿದ್ದ ಅವರು ತಲೆ ಎತ್ತಿ ಒಮ್ಮೆ ನನ್ನ ಮುಖ ನೋಡಿ "ಹಾಗೆ ಇರಬಾರದಾಗಿತ್ತು. ಯಾವ ಯೋಚನೆಯಲ್ಲೊ ಹಾಗೆ ಬರೆದುಬಿಟ್ಟಿದ್ದೇನೆ ಅದರ ಕೆಳಗೊಂದು ಗೀಟು ಹಾಕು. (ಮೊದಲ ಮುದ್ರಣ, ಪುಟ 38) ಮುಂದಿನ ಮುದ್ರಣದಲ್ಲಿ ಸರಿಪಡಿಸೋಣ"—ಎಂದರು.

ಹುಟ್ಟಿದಂದಿನಿಂದ ಗಿಡ ಮರಗಳ ಹಸಿರನ್ನುಂಡ ನನ್ನ ಕಣ್ಣುಗಳು ಮೊದಲ ಬಾರಿಗೆ ದುರ್ಗದ ಬೆಟ್ಟಗಳ ಬಂಡೆಗಳನ್ನು ಕಂಡಾಗ ಬರಡು ಕೊರಡನ್ನು ಕಂಡಂತಾಗಿತ್ತು. ಆದರೆ

ದಿನಗಳೆದಂತೆ ಗೆಳೆಯರು ಮತ್ತು ಆ ಊರಿನ ಜನರ ಪ್ರೀತಿ, ಕೋಟೆಯ ಇತಿಹಾಸದ ಅರಿವು ನನಗಾದಂತೆ ಬರಡು ಬಂಡೆಗಳಲ್ಲೂ ಬಣ್ಣಗಳು ಕಂಡವು. ಚಿತ್ರದುರ್ಗದ ಇತಿಹಾಸವನ್ನು ಅರೆದು ಕುಡಿದುಕೊಂಡಂತಿದ್ದ ಸುಬ್ಬರಾಯರು ಲೀಲಾಜಾಲವಾಗಿ ಸಣ್ಣ ಪುಟ್ಟ ಘಟನೆಗಳನ್ನೂ ಬಿಡದೆ ಬರಿ ಬಾಯಲ್ಲೇ ಹೇಳುತ್ತಿದ್ದ ರೀತಿಗೆ ನಾನು ಬೆರಗಾಗಿದ್ದೆ, ದಸರಾ ರಜೆಗೆ ಊರಿಗೆ ಹೋಗುವ ಯೋಚನೆಬಿಟ್ಟು ದುರ್ಗದಲ್ಲೇ ಉಳಿದೆ.

ಅವರ ಮಗ ಪ್ರದೀಪಕುಮಾರ ನನಗೆ ಒಳ್ಳೆಯ ಗೆಳೆಯನಾದ. ಇಬ್ಬರೂ ದುರ್ಗದ ಬೀದಿಗಳನ್ನೆಲ್ಲ ಖುಷಿಯಿಂದ ಅಲೆದವು. ಎಷ್ಟೇ ಅಲೆದರೂ ಸಂಜೆ ಆರು ಗಂಟೆಗೆ ಮಾತ್ರ ನಾನು ಸುಬ್ಬರಾಯರ ಬಳಿ ಹಾಜರಾಗಿಬಿಡುತ್ತಿದ್ದೆ. ಶ್ರೀಶೈಲ ಆರಾಧ್ಯ, ಬಿ. ರಾಜಶೇಖರಪ್ಪ (ಕನ್ನಡ ಅಧ್ಯಾಪಕ, ಸರ್ಕಾರಿ ವಿಜ್ಞಾನ ಕಾಲೇಜು, ಗೆಳೆಯರಾದ ಎಸ್. ಕೆ. ಮಧುಸೂದನ, ನಾಗರಾಜ ಹೊಯ್ಸಳ, ಎಸ್. ರಾಮಲಿಂಗಪ್ಪ ಮುಂತಾದವರೆಲ್ಲ ಸೇರಿ ಹರಟೆ ಹೊಡೆಯುತ್ತಿದ್ದೆವು.

ಒಂದು ದಿನ ಸುಬ್ಬರಾಯರು ಮತ್ತು ನಾನು ಇಬ್ಬರೇ ಇದ್ದೆವು. "ನೀನೇನಾ ದರೂ ಬರಿದಿದ್ದೀಯಾ?"— ಎಂದು ಕೇಳಿದರು. "ಪದ್ಯ ಬರೆದಿದ್ದೇನೆ"— ಎಂದೆ. "ಮತ್ತೆ ಇಷ್ಟು ದಿನ ಹೇಳಲೇ ಇಲ್ಲವಲ್ಲ"–ಎಂದು ಆಶ್ಚರ್ಯ ವ್ಯಕ್ತಪಡಿಸಿದರು. "ಕಾದಂಬರೀ ಬರೆಯುವ ಜನ ನೀವು. ನನ್ನ ಪದ್ಯಗಳನ್ನೆಲ್ಲಾ ಓದುತ್ತೀರೋ ಇಲ್ಲವೋ"- ಎಂದೆ. "ನಾನೂ ಮೊದಲು ಬರೆದದ್ದು ಪದ್ಯಗಳನ್ನೇ ಕಣೋ. ಪಂಪನನ್ನ ಓದಿದಾಗ ಅವನ ಬಗ್ಗೆ ಒಂದು ಕಾದಂಬರಿ ಬರೀಬೇಕು ಅನಿಸಿತ್ತು. ಸಾಧ್ಯವಾದರೆ ಬರೀತೇನೆ. ನೀನು ಇಲಿಯಟ್‌ನ ಪದ್ಯಗಳನ್ನ ಓದಿದೀಯಾ? ಮೈಸೂರಿಗೆ ಬಾ. ತೋರಸ್ತೇನೆ. ಅವನ ಪದ್ಯಕ್ಕೆಲ್ಲಾ ನೋಟ್ಸ್ ಮಾಡಿಟ್ಟಿದ್ದೇನೆ."— ಎಂದರು. ರಾತ್ರಿ ಮನೆಗೆ ಹೊರಟಾಗ "ಬೆಳಿಗ್ಗೆ ಬರುವಾಗ ಪದ್ಯಗಳನ್ನ ತಗೊಂಬಾ. ಓದತೇನೆ"— ಎಂದರು,

ಮರುದಿನ ಪದ್ಯಗಳನ್ನ ನೋಡಿ ಮೆಚ್ಚಿಕೊಂಡರು ಒಂದೆರಡು ಪದ್ಯಗಳನ್ನು ಹೀಗೆ ಸರಿಪಡಿಸಿದರೆ ಚೆನ್ನಾಗುತ್ತದೆ ಎಂದು ಹೇಳಿದವರು "ನಾನು ತಿದ್ದೋದಿಲ್ಲಪ್ಪಾ ಬೇರೆಯವರ ಬರಹಗಳನ್ನೆಲ್ಲಾ ತಿದ್ದೋ ಹಕ್ಕು ನನಗಿಲ್ಲ, ನೀನು ಒಪ್ಪಿದರೆ, ನಿನ್ನ ಮನಸ್ಸಿಗೆ ಸರಿ ಅನಿಸಿದರೆ ಹಾಗೆ ಮಾಡು"— ಎಂದು ಮುಗುಳ್ನಗುತ್ತ ಹಾಸ್ಯದ ರೀತಿಯಲ್ಲಿ ಹೇಳಿದರು. ಅವರಿಗೆ ಇಷ್ಟವಾದ ಒಂದು ಪದ್ಯವನ್ನು ಆರಾಧ್ಯರ ಎದುರಿಗೂ ಓದಿಸಿದರು. ಆರಾಧ್ಯರಿಗೆ ಸ್ವಲ್ಪ ಹೊಟ್ಟೆಕಿಚ್ಚಾಯಿತೋ ಏನೋ! ಮಾತಾಡಲೇ

ಇಲ್ಲ. ಅದು ಇದು ಮಾತಾದನಂತರ ಮೇಜಿನ ಮೇಲಿದ್ದ "ಲಂಕೇಶ ಪತ್ರಿಕೆ" ಕಣ್ಣಿಗೆ ಬಿತ್ತು. ಗೋಕಾಕ ಚಳುವಳಿ ಮುಗಿದು ಬಿಸಿ ಆರದಿದ್ದ ಕಾಲ ಅದಾಗಿತ್ತು. ಚಳುವಳಿಗಳಲ್ಲಿ ಭಾಗವಹಿಸಿದ, ಅನೇಕ ಸಾಹಿತಿಗಳ ವರ್ತನೆಯ ಬಗ್ಗೆ ಲಂಕೇಶರು ನಿಷ್ಠುರವಾಗಿ ಬರೆದಿದ್ದರು. ಸುಬ್ಬರಾಯರ ಬಗ್ಗೆ ಅವರೇನೂ ಬರೆದಿರಲಿಲ್ಲ, ನಾನು ಅವರನ್ನು ಕೇಳಿದೆ: ಲಂಕೇಶ್ ಪತ್ರಿಕೆ ಬಗ್ಗೆ ನಿಮಗೆ ಏನನಿಸುತ್ತೆ ?– ನನ್ನ ಪ್ರಶ್ನೆಗೆ ಅವರು ಕ್ಷಣ ಮೌನವಹಿಸಿದರು. ನಂತರ "DEPTH ಇಲ್ಲ ಕಣೋ"- ಎಂದರು. (ನಾವು ಲಂಕೇಶ್ ಬಗೆಗೆ ಮಾತಾಡಿದ್ದು ನವೆಂಬರ್ 83ರಲ್ಲಿ. ಮುಂದೆ ಏಪ್ರಿಲ್ 10, 84ರಲ್ಲಿ ತ.ರಾ.ಸು ನಿಧನರಾದಾಗ "ಪ್ರಗತಿಶೀಲ ಗುಂಪಿನಿಂದ ಉದುರಿದ ಇನ್ನೊಂದು ದಳ" --ಎಂದು ಲಂಕೇಶ್ ಬರೆದದ್ದು ನೆನಪಾಗುತ್ತದೆ)

"ನಿನ್ನ ಊರು ಕೆಳದಿಯ ಹತ್ತಿರ ಅನ್ನುತ್ತೀಯ ಕೆಳದಿ ಇತಿಹಾಸದ ಬಗ್ಗೆ ಬರಿಯೋದು ತುಂಬಾ ಇದೆ. ಐತಿಹಾಸಿಕ ದಾಖಲೆ ನಾನು ಒದಗಿಸ್ತೇನೆ. ಮೈಸೂರಿನ ನಮ್ಮನೆಗೆ ಬಾ. ಕೆಳದಿ ಬಗ್ಗೆ ನೀನು ಬರೀಬೇಕಯ್ಯ "ತರಾಸು ಹೇಳಿದರೋ ಸಿಗರೇಟು ಹಚ್ಚಿದರು. ಆರೋಗ್ಯ ಸುಧಾರಿಸಬೇಕಾದರೆ ನೀವು ಸಿಗರೇಟು ಬಿಡಬೇಕು"—ಎಂದು ಅವರ ಚಡ್ಡಿ ಗೆಳೆಯರಾದ ಡಾ॥ ಬಿ. ಕೆ. ನಾಗರಾಜ್ ಹೇಳುತ್ತಿದ್ದರು. "ಪ್ರಾಣ ಬೇಕಾದರೂ ಹೋಗಲಯ್ಯ, ಸಿಗರೇಟು ಬಿಡೋದಿಲ್ಲ" ಎನ್ನುತ್ತ ತಂಬಾಕಿನ ಹೊಗೆಯನ್ನು ಆಸ್ವಾದಿಸುತ್ತಿದ್ದರು. ಪ್ರತಿಯೊಂದು ಸಿಗರೇಟನ್ನೂ ಫಿಲ್ಟರ್ ಟಿಪ್ಪಿನವರೆಗೂ ಸೇದುವುದು ಅವರ ಅಭ್ಯಾಸವಾಗಿತ್ತು. ಇವರು ಸಿಗರೇಟು ಬಿಟ್ಟರೆ ಆರೋಗ್ಯ ಸುಧಾರಿಸುತ್ತದೆ ಎಂದು ನನಗೆ ಅನಿಸಿದರೂ ಅವರ ಮನಸ್ಸಿಗೆ ಕಡಿವಾಣ ಹಾಕಲು ನನ್ನಿಂದ ಸಾಧ್ಯವೇ ? ಅಲ್ಲದೆ ಅರವತ್ತರ ಅವರಿಗೆ ಇಪ್ಪತ್ತರ ನಾನು ಬುದ್ಧಿವಾದ ಹೇಳುವುದೇ ? ಸುಮ್ಮನಾಗಿಬಿಡುತ್ತಿದ್ದೆ.

ಒಂದು ದಿನ ಸಂಜೆ ಇಬ್ಬರೇ ಏಕಾಂತದಲ್ಲಿ ಮನೆಯ ಮುಂದಿನ ಚಿಕ್ಕ ಅಂಗಳದಲ್ಲಿ ಕುರ್ಚಿ ಹಾಕಿಕೊಂಡು ಕೂತು ಹರಟುತ್ತಿದ್ದಾಗ ಅವರು ತಮ್ಮ ಬಾಳಿನ ಕಷ್ಟದ ದಿನಗಳನ್ನು ನೆನಸಿಕೊಂಡು ಅತ್ತು ಬಿಟ್ಟರು. ಮನೆಯಿಂದ ಓಡಿಹೋಗಿದ್ದು, ಚಳುವಳಿಗಳಲ್ಲಿ ಭಾಗವಹಿಸಿ ಕಷ್ಟಗಳನ್ನು ಅನುಭವಿಸಿದ್ದು, ಬಾಳೇ ಹಣ್ಣು ತಿಂದು ಹೊಟ್ಟೆ ತುಂಬಿಸಿಕೊಂಡಿದ್ದು, ಪ್ರಜಾವಾಣಿಯಲ್ಲಿ ಕೆಲಸ ಮಾಡುವಾಗ ಪೇಪರನ್ನೇ ಹಾಸಿಗೆ ಹೊದಿಕಲು ಮಾಡಿಕೊಂಡು ಮಲಗಿ ಎದ್ದಿದ್ದು "ಮನೆಗೆ ಬಂದ ಮಹಾಲಕ್ಷ್ಮಿ" ಮೊದಲ ಕಾದಂಬರಿಯನ್ನು ಅಚ್ಚು ಮಾಡಲು ಪರದಾಡಿದ್ದು ಎಲ್ಲವೂ ಅವರ ಮಾತುಗಳಲ್ಲಿ ಸೇರಿತ್ತು.

ಅನಕೃ ಮತ್ತು ಇವರು ಒಟ್ಟಿಗೆ ಇದ್ದ ಕಾಲದಲ್ಲಿ ಅನೇಕ ತರುಣ ಬರಹಗಾರರು ತಮ್ಮ ಕಥೆ, ಕಾದಂಬರಿಗಳ ಹಸ್ತಪ್ರತಿಗಳನ್ನು ಇವರಿಗೆ ಓದಲು ಕೊಡುತ್ತಿದ್ದರಂತೆ. ಇವರ ಮನೆಗೆ ಅವರು ಎಷ್ಟೇ ಅಲೆದರೂ ಇವರು ಅದನ್ನೆಲ್ಲ ಓದುವುದು ತಡವಾಗುತ್ತಿತ್ತಂತೆ. ಅವರು ಸಪ್ಪೆ ಮೋರೆ ಮಾಡಿಕೊಂಡು ಹೋಗುತ್ತಿದ್ದರಂತೆ. ಒಮ್ಮೆ ಒಬ್ಬ ಬರಹಗಾರನಿಗೆ ನಾಳೆ ಬಾ, ನಾಳಿದ್ದು ಬಾ ಎಂದು ಸತಾಯಿಸಿದಾಗ "ಏನ್ರೀ ಸತಾಯಿಸ್ತೀರಿ, ಕನ್ನಡ ಸಾಹಿತ್ಯಾನ ನೀವೇ ಕೊಂಡುಕೊಂಡ ಹಾಗೆ ಆಡ್ತೀರಲ್ಲ"— ಎಂದು ದಬಾಯಿಸಿದನಂತೆ. "ನಿಜವಾದ ಬರಹಗಾರ ಅಂದ್ರೆ ಇವನೇ ಕಣೋ ಸುಬ್ಬು"— ಎಂದು ಅನಕೃ ಹೇಳಿದರಂತೆ. ಹೀಗೆ ಕೆಲವು ಸ್ವಾರಸ್ಯದ ಘಟನೆಗಳನ್ನೂ ಹೇಳಿ ನಗುತ್ತಿದ್ದರು.

ಚಿಕ್ಕಂದಿನಲ್ಲಿ ಅವರ ಹೆಸರಿನ ಬಗೆಗೆ ಮಾಡಿದ ಹಾಸ್ಯದ ಘಟನೆಯನ್ನು ಅವರಿಗೆ ಒಂದು ದಿನ ಹೇಳಿದೆ. ಮುಗುಳ್ನಕ್ಕರು. "ನೀನೊಂದು ರೀತಿಯ ತುಂಟ ಕಣೋ"— ಎಂದರು.

ಜನವರಿ ೯, ೧೯೮೩ ರಂದು ಶ್ರೀಶೈಲ ಆರಾಧ್ಯರ 'ಸಂಶೋಧನೆ ಹಾದಿಯಲ್ಲಿ' ಕೃತಿ ಬಿಡುಗಡೆಯಾಯಿತು. ಫೆಬ್ರವರಿ ೮, ೧೯೮೩ರಲ್ಲಿ ಸುಬ್ಬರಾಯರು ಮೈಸೂರಿಗೆ ಹೋದರು.

ಏಪ್ರಿಲ್ 26ಕ್ಕೆ "ದುರ್ಗಾಸ್ತಮಾನ" ಕಾದಂಬರಿಯ ಬಿಡುಗಡೆ ಸಮಾರಂಭ ನಡೆಯಿತು. ಸಮಾರಂಭಕ್ಕೆ ದುರ್ಗದ ಪೋಲೀಸ್ ಪರೇಡ್ ಗ್ರೌಂಡ್ ಕಿಕ್ಕಿರಿದಿತ್ತು. ಒಂದು ಕೃತಿ ಬಿಡುಗಡೆಯ ಸಮಾರಂಭಕ್ಕೆ ಹೀಗೆ ಜನ ಘೇರಾಯಿಸಿದ್ದನ್ನು ನೋಡಿದ್ದು ಇದೇ ಮೊದಲು.

ಬಿಡುಗಡೆ ಸಮಾರಂಭವಾಗಿ ಎರಡು ದಿನಗಳ ನಂತರ ತ.ರಾ.ಸು. ಅವರನ್ನು ಮೈಸೂರಿಗೆ ಕಳಿಸಿಕೊಡುವಾಗ ನನ್ನ ಕಣ್ಣುಗಳು ಒದ್ದೆಯಾಗ ತೊಡಗಿತ್ತು. ತ.ರಾ.ಸು. ಅವರ ಸಹವಾಸ ಮಾಡಿದವರಿಗೆ ಮಾತ್ರ ಆ ದುಃಖ ಅರ್ಥವಾಗುತ್ತದೆ.

ಡಿಗ್ರಿ ಮುಗಿದ ನಂತರ ನಾನು ಬಂದಗದ್ದೆಗೆ ಬಂದೆ. ಈ ನಡುವೆ ಅನೇಕ ಬಾರಿ ಮೈಸೂರಿನ ಅವರ "ಗಿರಿಕನ್ಯಕಾ"ಕ್ಕೆ ಹೋಗಿ ಬಂದೆ. ಅಲ್ಲಿ ಅವರೊಡನೆ ಕಳೆದ ಕಾಲ ಇನ್ನೂ ಜೀವಂತವಾಗಿದೆ. ತ.ರಾ.ಸು. ಅವರ ಹೆಂಡತಿ ಅಂಬುಜಾ ಅವರ ಆತಿಥ್ಯ, ಮಕ್ಕಳ ಸ್ನೇಹ ಎಲ್ಲ ಸದಾ ಹಸಿರಾಗಿ ಇರುವಂತಹವು.

೧೯೮೪ರ ಏಪ್ರಿಲ್ ೧೦ ರಂದು ಬಂದಗದ್ದೆಯ ನನ್ನ ಹಳ್ಳಿಯ ಮನೆಯಲ್ಲಿದ್ದೆ. ಸಂಜೆ ಕೊಟ್ಟಿಗೆಯಲ್ಲಿ ಎಮ್ಮೆಯ ಹಾಲು ಹಿಂಡುತ್ತಿದ್ದೆ. ಊರಿನ ಹಿರಿಯರಾದ ಮಹಬಲ ಭಟ್ಟರು "ತ.ರಾ.ಸು. ಹೋಗಿ ಬಿಟ್ಟರೋ"— ಎನ್ನುತ್ತ ಕೊಟ್ಟಿಗೆಯೊಳಗೆ ಬಂದರು. ಭಟ್ಟರು ಅಳುತ್ತಿದ್ದರು. ನಾನು ಮಂಕಾದೆ. ಹಿಂದಿನ ನೆನಪುಗಳೆಲ್ಲ ಮರುಕಳಿಸಿತು, ಸುಮಾರು ಹದಿಮೂರು-ಹದಿನಾಲ್ಕು ವರ್ಷಗಳ ಹಿಂದೆ ನಾನು ಸುಬ್ಬರಾಯರ ಹೆಸರಿನ ಬಗ್ಗೆ ಮಾಡಿದ ಹಾಸ್ಯ ನೆನಪಾಯಿತು, ದುಃಖ ಉಮ್ಮಳಿಸಿತು.

ಇದನ್ನು ಬರೆದು ಶೂದ್ರಕ್ಕೆ ಕಳಿಸುವ ಸಂದರ್ಭದಲ್ಲೇ ತ.ರಾ.ಸು. ಮರಣದ ವಾರ್ತೆ ಮುಟ್ಟಿಸಿದ ಮಹಬಲಭಟ್ಟರು (ಕರ್ನಾಟಕ ಜನತಾ ಪಕ್ಷದ ಕಾರ್ಯದರ್ಶಿ ಬಂದಗದ್ದೆ ರಮೇಶ್ ಅವರ ತಂದೆ) ವಿಧಿವಶರಾದರು. (ಸೆಪ್ಟೆಂಬರ್ 24. 1985) ಒಳ್ಳೆಯ ಸಹೃದಯರಾಗಿದ್ದ ಭಟ್ಟರು ಒಳ್ಳೆಯ ಕೃಷಿಕರೂ ಆಗಿದ್ದರು. ಬೇಂದ್ರೆ, ಧಾ. ಶಿ., ವಿ. ಸೀ., ಬಿ. ಜಿ. ಎಲ್. ಸ್ವಾಮಿ, ರಾಜರತ್ನಂ, ತ.ರಾ.ಸು ಮುಂತಾದ ಬರೆಹಗಾರರನ್ನೂ ಅಲ್ಲದೆ ಮಹಬಲಭಟ್ಟರಂತ ಅನೇಕ ಹಿರಿಯ ಸಹೃದಯರನ್ನು ಇತ್ತೀಚೆಗೆ ನಾವು ಕಳೆದುಕೊಂಡಿದ್ದೇವೆ. ಕಳೆದುಕೊಂಡ ದುಃಖದಲ್ಲಿ ಮುಂದೆ ಪಡೆದುಕೊಳ್ಳಬಹುದಾದ ಆಸೆಯನ್ನು ಉಳಿಸಿಕೊಳ್ಳಬೇಕಾಗಿದೆ.

---

ಶೂದ್ರಕ್ಕೆ ಶುಭಾಶಯಗಳು

**ಚೈತನ್ಯಕುಮಾರ್**

ಬೆಂಗಳೂರು

# ಸೆಲೆ

ಧಗಿಸುವ ಬೆಂಗಾಡ ಭೂಮಿಯಲ್ಲೂ
ನಡುವೆ ಒಮ್ಮೊಮ್ಮೆ ಚಿಮ್ಮುತ್ತದೆ
ಸೆಲೆ ಹರಿಯುತ್ತದೆ ಉಕ್ಕುತ್ತ,
ಧುಮ್ಮಿಕ್ಕುತ್ತ, ಮೂಲದ ಮಣ್ಣ
ಮುಕ್ಕುತ್ತ ಮುಕ್ಕಳಿಸುತ್ತ.

ಈ ಸೆಲೆಯೇ ಹೀಗೆ
ಕೊನರುತ್ತದೆ ಗ್ರೀಷ್ಮದ ನಡುವೆಯೇ
ಹಸಿರಾಗಿ, ನವಿರಾಗಿ ಬೆಳೆಯುತ್ತದೆ
ನೂರಾರು ಬಂಜೆಯೊಡಲೊಳಗೆಲ್ಲೋ
ಒಂದರ ಬಸಿರಾಗಿ ಉಸಿರಾಗಿ

ಹೊಳೆಯುತ್ತದೆ ಕಡಲಿನಾಳದ
ಮುತ್ತಾಗಿ, ಸಂಪತ್ತಾಗಿ
ಎಲ್ಲಾದರೇನು ಹುಟ್ಟು ?
ಹರಿಯದೇನು ತಾಯೊಡಲ
ಮಮತೆ ಎದೆಯ ಹಾಲು
ಕಾವ್ಯದ ಜೇನ ಹೊನಲು ?
ಕಪ್ಪಾದರೇನು ಕೋಗಿಲೆ
ಸಾಲದೆ ಸಂತಸಕೆ ಸವಿಗೊರಲು.

—ಎಸ್. ನಟರಾಜ

ಎಸ್. ನಟರಾಜ, ಲೆಕ್ಕ ಅಧೀಕ್ಷಕರ ಕಚೇರಿ, ಚಿತ್ರದುರ್ಗ-577501

# ಸಮಾಜವಾದೀ ಶಿಬಿರ: ಒಂದು ವರದಿ

—ಎಸ್. ಎಲ್. ಗೋಪಾಲಕೃಷ್ಣ

ಕಳೆದ 30–40 ವರ್ಷಗಳಿಂದ ಸಮಾಜವಾದಿ ಚಳುವಳಿಯಲ್ಲಿ ಕ್ರಿಯಾಶೀಲರಾಗಿ ನಾಯಕರಾಗದೆಯೇ ಅನೇಕ ಚಳುವಳಿಗಳಿಗೆ 'ನಾಯಕತ್ವ' ನೀಡುತ್ತಿರುವ ಸಮಾಜವಾದಿ ಚಿಂತಕ ಮತ್ತು ವಿದ್ವಾಂಸರು ಸುರೇಂದ್ರ ಮೋಹನ್. ಭಾರತದ ಸಾಮಾಜಿಕ–ಆರ್ಥಿಕ ಚಹರೆಯನ್ನು ಜನಪರವಾಗಿ ಬದಲಿಸಬೇಕೆಂಬ ಪ್ರತಿಯೊಂದು ಪಕ್ಷಾತೀತ ಚಳುವಳಿಯೊಂದಿಗೂ ಸಂಬಂಧವಿಟ್ಟುಕೊಂಡಿರುವ ಅವರನ್ನು ಕೇವಲ 'ರಾಜಕೀಯ ವ್ಯಕ್ತಿ' ಎಂದು ಕರೆಯುವುದು ಅರ್ಥಪೂರ್ಣವಾಗದು. ಅಂತಹ ಅಪರೂಪದ ಚಿಂತಕ, ವಿದ್ವಾಂಸ, ಕ್ರಿಯಾಶೀಲರಾದ 'ಜೀವಂತ ರಾಜಕೀಯ ವ್ಯಕ್ತಿ'ಯ ನೇತೃತ್ವದಲ್ಲಿ ಒಂದು ಅಧ್ಯಯನ ಶಿಬಿರ ನಡೆಸಬೇಕೆಂಬ ಸಮಾಜವಾದಿ ಅಧ್ಯಯನ ಕೇಂದ್ರದ ಕಾರ್ಯಕರ್ತರ ಆಸೆ ನೆರವೇರಿದ್ದು ಕಳೆದ ಜುಲೈ 14 ರಂದು. ಅಂದು ಅವರ ನೇತೃತ್ವದಲ್ಲಿ "90 ರ ದಶಕ! ಒಂದು ಸಮಾಜವಾದಿ ದೃಷ್ಟಿಕೋನ" ಎಂಬ ಶಿಬಿರವನ್ನು ಬೆಂಗಳೂರಿನಲ್ಲಿ ವಿವಿಧ ಕ್ಷೇತ್ರಗಳಲ್ಲಿನ ಯುವ ಸಮಾಜವಾದಿ ಕ್ರಿಯಾಶೀಲರಿಗಾಗಿ ಏರ್ಪಡಿಸಲಾಗಿತ್ತು.

ಶಿಬಿರವನ್ನು ಉದ್ಘಾಟಿಸಿದವರು ನಜೀರ್‌ಸಾಬ್. ಗಾಂಧೀಜಿ ಹೇಳಿದ ಆರ್ಥಿಕ–ಸಾಮಾಜಿಕ ಚೌಕಟ್ಟಿನಲ್ಲಿ ಮಾತ್ರ ಭಾರತದ ಸಂದರ್ಭದಲ್ಲಿ ಸಮಾಜವಾದ ಸಾಧ್ಯ ಎಂದು ಚರ್ಚೆಗೆ ಚೌಕಟ್ಟು ಒದಗಿಸಿದ ಸೈದ್ಧಾಂತಿಕ ಸಿದ್ಧತೆ ಇರುವ ಅಪರೂಪದ ಸಚಿವ ನಜೀರ್‌ಸಾಬ್. ಉತ್ಪಾದನಾ ವಿಧಾನ ಬದಲಾಯಿಸದೆ ಹೇಗೆ ಸಮಾಜವಾದ ಅಸಾಧ್ಯ ಎಂಬುದನ್ನು ವಿವರಿಸಿದರು.

ಫ್ರಾನ್ಸ್ ದೇಶದ ಸಮಯೋಚಿತ ಉದಾಹರಣೆ ನೀಡಿದ ಅವರು, ಸಮಾಜವಾದಿಗಳ ಸರ್ಕಾರವಿದ್ದರೂ ಅಲ್ಲಿನ ಆರ್ಥಿಕ ಚೌಕಟ್ಟು ಯುದ್ಧೋಪಕರಣಗಳ ಉತ್ಪಾದನೆ ಮೇಲೆ ಅವಲಂಬಿಸಿರುವುದರಿಂದ ಅಲ್ಲಿ ಸಮಾಜವಾದಿ ಕನಸನ್ನು ನನಸುಮಾಡಲು ಅಸಾಧ್ಯವಾಗಿದೆ ಎಂದು ಮನಮುಟ್ಟುವಂತೆ ಹೇಳಿದರು. ವರ್ಗರಹಿತ ವಿಶ್ವದೊಂದಿಗೆ ಯುದ್ಧರಹಿತ ವಿಶ್ವವೂ ಸಮಾಜವಾದಿಗಳ ಕನಸು ಎಂಬುದನ್ನು ನಜೀರ್ ಜ್ಞಾಪಿಸಿದರು.

---

ಎಲ್. ಎಸ್. ಗೋಪಾಲಕೃಷ್ಣ, ಇಂಗ್ಲೀಷ್ ಅಧ್ಯಾಪಕ, ಶೇಷಾದ್ರಿಪುರಂ ಕಿರಿಯ ಕಾಲೇಜು, ಬೆಂಗಳೂರು–560020

ಮೊದಲನೇ ಗೋಷ್ಠಿಯಲ್ಲಿ 90ರ ದಶಕದ ಆರ್ಥಿಕತೆ ಬಗ್ಗೆ ಮಾತನಾಡಿದ ಸುರೇಂದ್ರ ಮೋಹನ್ ರಾಜೀವ್‌ರ ನವೀಕರಣ ಮತ್ತು 21ನೇ ಶತಮಾನಕ್ಕೂ ಜಿಗಿತದ ಕಲ್ಪನೆಗಳನ್ನು ಉಗ್ರವಾಗಿ, ಆದರೂ ಅಷ್ಟೇ ಆಧಾರಸಹಿತವಾಗಿ ವಿರೋಧಿಸಿದರು. ಸಮಾಜವಾದಿ ನೀತಿಗಳನ್ನು ಸ್ವಾತಂತ್ರ್ಯೋತ್ತರ ಭಾರತದಲ್ಲಿ ಜಾರಿಗೆ ತರಲಾಗಿದೆ ಎಂದು ಹೇಳಲಾಗುತ್ತದೆ. ಆದರೆ ಸಮಾಜವಾದ ಮಾತ್ರ ನನಸಾಗಲಿಲ್ಲ ಎಂದು ಸವಿಸ್ತಾರವಾಗಿ ಅಂಕಿ–ಅಂಶಗಳೊಂದಿಗೆ ವಿಷದೀಕರಿಸಿದರು. ಭೂವಿತರಣಾಕಾಯ್ದೆ ಜಾರಿಗೆ ಬಂದಿದೆ. ಆದರೆ ನಮ್ಮ ನಾಡಿನಲ್ಲಿ ಶೇಕಡಾ ಐದು ಜನ ಒಟ್ಟು ವ್ಯವಸಾಯ ಯೋಗ್ಯಭೂಮಿಯ ಶೇಕಡಾ ಇಪ್ಪತ್ನಾಲ್ಕು ಭಾಗವನ್ನೂ, ಹಾಗೂ ಇನ್ನೊಂದು ಶೇಕಡಾ ಹದಿನೈದು ಜನ ಭೂಮಿಯ ಶೇಕಡಾ ಇಪ್ಪತ್ನಾಲ್ಕು ಭಾಗವನ್ನೂ ಒಡೆತನದಲ್ಲಿಟ್ಟುಕೊಂಡಿದ್ದಾರೆ. ಯಾವುದೇ ರಾಷ್ಟ್ರ ಹೆಮ್ಮೆ ಪಡುವಂತೆ ರಾಷ್ಟ್ರೀಯ ಆದಾಯದ ಶೇಕಡಾ 24 ಭಾಗ ಉಳಿತಾಯ ಸಾಧಿಸಿದ್ದೇವೆ. ಆದರೆ ಬೆಳವಣಿಗೆ ವೇಗ ಶೇಕಡಾ 3ಕ್ಕಿಂತ ಹೆಚ್ಚಾಗಿಲ್ಲ. ಬ್ಯಾಂಕುಗಳನ್ನು ರಾಷ್ಟ್ರೀಕರಿಸಲಾಗಿದೆ. ಆದರೆ ಟಾಟಾ–ಬಿರ್ಲಾರ ಕಂಪೆನಿಗಳ ಬಂಡವಾಳದಲ್ಲಿ ರಾಷ್ಟ್ರೀಕೃತ ಬ್ಯಾಂಕ್ ಮತ್ತು ಸರ್ಕಾರಿ ಹಣಕಾಸು ಸಂಸ್ಥೆಗಳ ಭಾಗ ಶೇಕಡಾ 40 ಕ್ಕಿಂತ ಹೆಚ್ಚು. 1951ರಲ್ಲಿ 50 ಲಕ್ಷವಿದ್ದ ನಿರುದ್ಯೋಗ ಇಂದು 4 ಕೋಟಿಯಾಗಿದೆ. ರಾಜಧನ ರದ್ದತಿಯಾಗಿದೆ. ಆದರೆ ರಾಜರ ಸವಲತ್ತುಗಳು, ರಾಜಕೀಯದ ಮೇಲೆ ಅವರ ಹಿಡಿತ ಕಡಿಮೆಯಾಗಿಲ್ಲ. 1951ರಲ್ಲಿ ಶೇಕಡಾ 9 ಇದ್ದ ಭೂಹೀನ ಕಾರ್ಮಿಕರು, ಈ ಎಲ್ಲಾ 'ಸಮಾಜವಾದಿ ಕಾರ್ಯಕ್ರಮಗಳ ನಂತರ ಇಂದು ಶೇಕಡಾ 33 ರಷ್ಟಾಗಿದ್ದಾರೆ. 1947ರಲ್ಲಿ 47 ಕೋಟಿ ಇದ್ದ ಬಿರ್ಲಾರ ಆಸ್ತಿ ಇಂದು 2800 ಕೋಟಿ ರೂಪಾಯಿಗಳಾಗಿವೆ. ರಾಷ್ಟ್ರದಲ್ಲಿನ 41 ಸೆಣಬು ಕಾರ್ಖಾನೆಗಳಲ್ಲಿ 22 ಕಾರ್ಖಾನೆಗಳು ಮುಚ್ಚಿವೆ. ಎಲ್ಲಾ ರೋಗಪೀಡಿತ ಜವಳಿ ಗಿರಣಿಗಳನ್ನೂ ಸರ್ಕಾರದ ರಾಷ್ಟ್ರೀಯ ಗಿರಣಿ ನಿಗಮ ವಹಿಸಿಕೊಳ್ಳುತ್ತಿದೆ. ಸಿಮೆಂಟ್, ಇಂಜಿನೀಯರಿಂಗಿನಲ್ಲೂ ಇದೇ ಕಥೆ. ಸಾರ್ವಜನಿಕ ಹಾಗೂ ಖಾಸಗಿ–ಎರಡೂ ಕ್ಷೇತ್ರಗಳೂ ವಿಫಲವಾಗುತ್ತಿವೆ. ಇವೆಲ್ಲಕ್ಕೂ ತಪ್ಪು ತಂತ್ರಜ್ಞಾನ ಹಾಗೂ ಅಭಿವೃದ್ಧಿ ವಿಧಾನವೇ ಕಾರಣ ಎಂದು ಹೇಳಿ, ಈಗ ಪ್ರಚುರಪಡಿಸಲಾಗುತ್ತಿರುವಂಥ 'ನವೀಕರಣ'ವನ್ನು ಕೈಬಿಡಲು ಒತ್ತಾಯಿಸಿದರು. 'ಮಾನವ ಮಾನವನ ಪರವಾಗಿ ಯಂತ್ರವನ್ನು ಬಳಗಿಸಬೇಕು,' ಎಲ್ಲಾ ರೀತಿಯ ಯಂತ್ರಗಳನ್ನು ಕಣ್ಣು ಮುಚ್ಚಿಕೊಂಡು ಒಪ್ಪಿಕೊಳ್ಳುವ ಬದಲು, ಅವುಗಳನ್ನು ಅಗತ್ಯದ ಆಧಾರದ ಮೇಲೆ ಆಯ್ಕೆ ಮಾಡಿಕೊಳ್ಳಬೇಕು ಎಂದೂ ಹೇಳಿದರು. ಇಂದಿನ ಎಲ್ಲಾ ದುಸ್ಥಿತಿಗೂ ಮೂಲಕಾರಣವನ್ನು ವಿಶ್ಲೇಷಿಸಿದ ಅವರು, ನವೀಕರಣ ಮತ್ತು ಉನ್ನತ ತಂತ್ರಜ್ಞಾನಕ್ಕೆ ಅಗತ್ಯವಾದ ಭಾರೀ ಬಂಡವಾಳವನ್ನು ಇತರ ಬಡವರ್ಗಗಳಿಂದ ಸುಲಿಯುವ ಮೂಲಕ, ಅವರ ಉಳಿತಾಯವನ್ನು ಬೇರೆ ಕ್ಷೇತ್ರಗಳಿಗೆ ವರ್ಗಾಯಿಸುವ ಮೂಲಕ, ಸಂಗ್ರಹಿಸಲಾಗುತ್ತಿದೆ. ಇದು ಬಡತನ

ವನ್ನು, ಅಸಮಾನತೆಯನ್ನು ಅಗಾಧವಾಗಿ ಹೆಚ್ಚಿಸಿ ಸಮಾಜದಲ್ಲಿ ಹತ್ತಾರು ರೀತಿಯ ಸಮಸ್ಯೆಗಳನ್ನು ತರುತ್ತದೆ ಎಂದು ವಾದಿಸಿದರು. 'ನಮಗೆ ಸಂಬಳದಾರರು ಬೇಡ, ಸ್ವಯಂ ಉದ್ಯೋಗಿಗಳು ಬೇಕು' ಎಂದು ಹೇಳಿದ ಅವರು, ವ್ಯವಸಾಯಗಾರರು, ಕಾಡುವಾಸಿಗಳು, ಶ್ರಮಿಕರು ಮತ್ತು ಕೆಳವರ್ಗಗಳಲ್ಲಿ ಅವರುಗಳಲ್ಲಿ ಹುಟ್ಟುವ ಉಳಿತಾಯ ಹಣವನ್ನು ಬಿಟ್ಟರೆ, ಇದರಿಂದ ಅವರ ಕೊಳ್ಳುವ ಶಕ್ತಿ ಮತ್ತು ಉತ್ಪಾದನಾ ಶಕ್ತಿ ಹೆಚ್ಚಿ, ಒಂದು ಹೊಸ ಸಮಾಜವೇ ಉದಯಿಸುತ್ತದೆ ಎಂದರು. ಉನ್ನತ ತಂತ್ರಜ್ಞಾನದ ಕಾರ್ಖಾನೆಗಳಲ್ಲಿ 70,000 ರೂಪಾಯಿಗಳ ಬಂಡವಾಳಕ್ಕೆ ಒಂದು ಉದ್ಯೋಗ ಹುಟ್ಟಿಕೊಂಡರೆ, ಸಣ್ಣ ಕೈಗಾರಿಕೆ, ಗುಡಿಕೈಗಾರಿಕೆ ಮತ್ತು ವ್ಯವಸಾಯದಲ್ಲಿ ಕ್ರಮವಾಗಿ 10,000 ರೂ, 5,000 ರೂ. ಮತ್ತು 8,00 ರೂಪಾಯಿಗಳ ಬಂಡವಾಳಕ್ಕೆ ಒಂದು ಉದ್ಯೋಗ ಹುಟ್ಟಿಕೊಳ್ಳುತ್ತದೆ ಎಂದು ಅಂಕಿ-ಅಂಶ ಸಮೇತ ವಿವರಿಸಿದರು. ರಾಷ್ಟ್ರೀಕರಣದಿಂದಲೇ ಸಮಸ್ಯೆಗಳು ನಿವಾರಣೆಯಾಗುವುದಿಲ್ಲ. 'ರಾಷ್ಟ್ರೀಕರಣ'ದ ಬದಲು 'ಸಾಮಾಜೀಕರಣ' ಕಾರ್ಯರೂಪಕ್ಕಿಳಿಯಬೇಕು. ರೈತರು, ಬಳಕೆದಾರರು, ಸಹಕಾರಿ ಸಂಘಗಳು, ಕಚ್ಚಾ ಮಾಲು ಉತ್ಪಾದಕರು, ಕಾರ್ಮಿಕರು - ಹೀಗೆ ವಿವಿಧ ವರ್ಗಗಳ ಪ್ರತಿನಿಧಿಗಳು ಒಟ್ಟಾಗಿ ಉದ್ದಿಮೆಗಳನ್ನು ನಡೆಸಬೇಕು. ರಾಷ್ಟ್ರೀಕರಣ ಅಗತ್ಯವಿರುವಲ್ಲೆಲ್ಲಾ, ಅದರೊಂದಿಗೆ ಅಂತಹ ಸಂಸ್ಥೆಗಳ ಪ್ರಾಮುಖ್ಯತೆಗಳು (ಪ್ರಿಯಾರಿಟೀಸ್) ಬದಲಾಗಬೇಕು. ಬ್ಯಾಂಕುಗಳ ರಾಷ್ಟ್ರೀಕರಣವಾದರೂ ಅವು ಬಂಡವಾಳಿಗರಿಗೇ ಹೆಚ್ಚು ಸಹಾಯ ಮಾಡುವುದನ್ನು ಮುಂದುವರೆಸಿರುವುದರಿಂದ, ಏನೂ ಸಾಧನೆಯಾಗಲಿಲ್ಲ. ಇಡೀ ಅರ್ಥವ್ಯವಸ್ಥೆ ದೊಡ್ಡ ಕೈಗಾರಿಕೆಗಳ ಮೇಲೆ ಆಧಾರಿಸಿರುವುದು ಹೋಗಬೇಕು. ಚೈನಾದ ಮಾದರಿಯೂ ನಮಗೆ ಸೂಕ್ತವಲ್ಲ. ಮೊದಲಿನಿಂದಲೂ ಅಲ್ಲಿನ ಸರ್ಕಾರ ರೈತರ, ಕಾರ್ಮಿಕರ ಹೆಚ್ಚುವರಿ ಆದಾಯವನ್ನು ಅವರಲ್ಲಿಯೇ ಬಿಡುತ್ತಿರಲಿಲ್ಲ. ಸರ್ಕಾರ ತಾನು ಹೆಚ್ಚುವರಿ ಆದಾಯವನ್ನು ಪಡೆದು, ತನಗಿಷ್ಟ ಬಂದಂತೆ ತೊಡಗಿಸುತ್ತಿತ್ತು. ಅದು 'ರಾಜ್ಯವಾದ'ವೇ ಹೊರತು 'ಸಮಾಜವಾದ'ವಲ್ಲ ಎಂದರು.

ಎರಡನೇ ಗೋಷ್ಠಿಯ ವಿಷಯ : '೯೦ರ ದಶಕದ ರಾಜಕೀಯ'. ಈಗ ನಾವು ಕಲ್ಪಿಸಿಕೊಂಡಿರುವ 'ಜನತಂತ್ರ'ಕ್ಕಿಂತ ಭಿನ್ನವಾದ 'ಜನತಂತ್ರ'ದ ಪರಿಕಲ್ಪನೆಯ ಬಗ್ಗೆ ಗೋಷ್ಠಿಯಲ್ಲಿ ಚರ್ಚೆ ನಡೆಯಿತು. ಫ್ರೆಂಚ್ ಕ್ರಾಂತಿಯಿಂದ ಪ್ರಾರಂಭಿಸಿ ಇತಿಹಾಸದ ವಿವಿಧ ಘಟ್ಟಗಳನ್ನು ವಿಶ್ಲೇಷಿಸಿದ ಸುರೇಂದ್ರ ಮೋಹನ್, ಜನತಂತ್ರವೆಂದರೆ ವಿವಿಧ ಗುಂಪುಗಳ ಹಕ್ಕುಗಳೇ ಹೊರತು 'ವ್ಯಕ್ತಿ'ಯ ಹಕ್ಕುಗಳು ಮಾತ್ರವಲ್ಲ ಎಂದು ವಿವರಿಸಿದರು. ವ್ಯಕ್ತಿಯ ಹಕ್ಕುಗಳ ಜೊತೆಗೆ ವಿವಿಧ ಗುಂಪುಗಳು ತಮ್ಮ ಹಕ್ಕುಗಳಿಗೆ ಹೋರಾಡುವುದೇ ಜನತಂತ್ರ. ಅಂತಹ ಆಂದೋಲನವನ್ನು ನಾವು ಜನತಂತ್ರಕ್ಕೆ

ನೀಡಬೇಕು ಎಂದು ಹೇಳಿದರು. ಸಮಾಜವಾದಿಗಳು 'ಜನತಂತ್ರ'ದ ಬಗ್ಗೆ ಗುಂಪು ಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಯೋಚಿಸಬೇಕು. ಕೇವಲ 'ವ್ಯಕ್ತಿ'ಯ ಹಕ್ಕುಗಳ ಬಗ್ಗೆ ಮಾತ್ರವಲ್ಲ ಎಂದರು. ನಾಗರೀಕ ಹಕ್ಕುಗಳ ಬಗ್ಗೆ ಮಾತನಾಡುತ್ತಾ, ಆರ್ಥಿಕ ಹಿತಾಸಕ್ತಿಗಳೊಂದಿಗೆ ನಾಗರೀಕ ಹಕ್ಕುಗಳ ಸಂಬಂಧ ಕಲ್ಪಿಸಿದಾಗ ಮಾತ್ರ ಅವು ಅರ್ಥ ಪೂರ್ಣವಾಗುತ್ತವೆ ಎಂದರು. ಸ್ವೀಡನ್‌ನಲ್ಲಿ ರಾಷ್ಟ್ರೀಯ ಸಂಪತ್ತಿನ ಶೇಕಡಾ 35ಕ್ಕೂ ಹೆಚ್ಚು ಭಾಗ ಕಾರ್ಮಿಕ ಸಂಘ ಮತ್ತು ಸಹಕಾರಿ ಸಂಘಗಳ ಹಿಡಿತದಲ್ಲಿರುವುದನ್ನು ಎತ್ತಿ ಹೇಳಿ, ಅಂತಹ ವ್ಯವಸ್ಥೆ ಮಾತ್ರ ಹೆಚ್ಚು ಅರ್ಥಪೂರ್ಣ ಜನತಂತ್ರ ವ್ಯವಸ್ಥೆ ಎಂದರು. ಸಮೂಹ ಆಧಾರಿತ ಸಮಾಜದ ಪರಿಕಲ್ಪನೆ ಬಗ್ಗೆ ನಾವು ಹೆಚ್ಚು ಒತ್ತು ನೀಡಬೇಕು ಎಂದು ಅಭಿಪ್ರಾಯ ವ್ಯಕ್ತಪಡಿಸಿದರು. ಭಾರತೀಯ ಸಮಾಜದಲ್ಲಿ ವರ್ಗ ಧೃವೀಕರಣ ಆಗದಿರುವುದೇ ಸಮಾಜವಾದ ಮುನ್ನುಗ್ಗುವಲ್ಲಿ ವಿಫಲವಾಗಿರುವುದಕ್ಕೆ ಕಾರಣವಲ್ಲವೇ? ವರ್ಗ ಧೃವೀಕರಣ ಮಾಡುವ ವಿಧಾನವೇನು ? ಎಂಬ ಶಿಬಿರಾರ್ಥಿಯೊಬ್ಬರ ಪ್ರಶ್ನೆಗೆ ಉತ್ತರಿಸುತ್ತಾ, ಈ ಪ್ರಶ್ನೆ ಬಹಳ ದೊಡ್ಡದು, ಅದಕ್ಕೆ ತಮ್ಮಲ್ಲಿ ಉತ್ತರವಿಲ್ಲವೆಂದು ವಿನಯದಿಂದ ಹೇಳಿದರು.

ಭಾರತದ ಏಕತೆ ಮತ್ತು ಕೇಂದ್ರೀಕೃತ ವ್ಯವಸ್ಥೆ ಬಗ್ಗೆ ಎತ್ತಲಾದ ಪ್ರಶ್ನೆಗೆ ಉತ್ತರಿಸುತ್ತಾ, ಕೇಂದ್ರೀಕರಣ ಹೆಚ್ಚುತ್ತಾ ಹೋದಂತೆ ರಾಷ್ಟ್ರ ಒಡೆಯುವ ಸಾಧ್ಯತೆಯೂ ಹೆಚ್ಚುತ್ತಾ ಹೋಗುತ್ತದೆ, ಕೇಂದ್ರೀಕರಣ ಕಡಿಮೆಯಾದಂತೆ ರಾಷ್ಟ್ರದ ಸಮಗ್ರತೆಯ ಸಾಧ್ಯತೆಯೂ ಹೆಚ್ಚುತ್ತಾ ಹೋಗುತ್ತದೆ. ಪ್ರಕಾಶಸಿಂಗ್ ಬಾದಲ್‌ರ ಸರ್ಕಾರವನ್ನು ಕೇಂದ್ರ ಸರ್ಕಾರ ಉರುಳಿಸಿದ್ದರಿಂದ ತಮ್ಮನ್ನು ತಾವೇ ಆಳಿಕೊಳ್ಳಲು ಕೇಂದ್ರ ಬಿಡುವುದಿಲ್ಲವೆಂಬ ಭಯ ಸಿಖ್ಖರಲ್ಲಿ ಉಂಟಾಯಿತು, ಅದರಿಂದಲೇ ಈಗಿನ ಬಿಕ್ಕಟ್ಟು ಎಂದು ವಿವರಿಸಿದರು. ಅಸ್ಸಾಮಿನ ಸಮಸ್ಯೆ ಮೂಲಭೂತವಾಗಿ ನಿರುದ್ಯೋಗದ ಮತ್ತು ಅಸಮಾನ ಪ್ರಾದೇಶಿಕ ಬೆಳವಣಿಗೆಯ ಸಮಸ್ಯೆ ಎಂದ ಅವರು, ಒಟ್ಟಿನಲ್ಲಿ ಹೆಚ್ಚಿನ ಆರ್ಥಿಕ ಅಸಮಾನತೆ, ಹೆಚ್ಚುತ್ತಿರುವ ಬಡತನ ಮತ್ತು ನಿರುದ್ಯೋಗ ಮತ್ತು ಕೇಂದ್ರೀಕರಣ ವ್ಯವಸ್ಥೆ ಸಮಾಜದಲ್ಲಿ ವಿವಿಧ ತಳಮಳಗಳಿಗೆ ಕಾರಣವಾಗಿದ್ದು, ಅಸ್ಸಾಮಿನ ಕುಲ ಸಂಬಂಧ ಸಮಸ್ಯೆಯಾಗಿ, ಪಂಜಾಬಿನ ಸಿಖ್ಖರ ಸಮಸ್ಯೆಯಾಗಿ, ಗುಜರಾತಿನ ಮೀಸಲಾತಿ ಸಮಸ್ಯೆಯಾಗಿ ಕಾಣಿಸಿಕೊಂಡಿದೆ ಎಂದರು. ಗಾಂಧೀಜಿ, ಜೆ. ಪಿ. ಪ್ರತಿಪಾದಿಸಿದ ಏಕ ಕೇಂದ್ರೀಯ ಬಹುವೃತ್ತಗಳ (ಕಾನ್ಸೆಂಟ್ರಿಕ್ ವೃತ್ತಗಳ) ವ್ಯವಸ್ಥೆ ರಾಜಕೀಯ, ಆರ್ಥಿಕ ಕ್ಷೇತ್ರಗಳಲ್ಲಿ ಜಾರಿಗೆ ಬರಬೇಕೆಂದು ಆಶಿಸಿದರು. ಕೆಲವೇ ತಂತ್ರಜ್ಞರು ಯಂತ್ರಗಳ ಅವಿಷ್ಕಾರದಲ್ಲಿ ತೊಡಗುವ ಬದಲು, ಯಂತ್ರಗಳೊಂದಿಗೆ ಕೆಲಸ ಮಾಡುವ ಇಡೀ ಜನಸಮೂಹವೇ ಅವಿಷ್ಕಾರದಲ್ಲಿ ತೊಡಗಲು ಸಾಧ್ಯವಾಗುವ ವ್ಯವಸ್ಥೆ ರೂಪಿಸಬೇಕು. ಅದಕ್ಕಾಗಿ ಸೂಕ್ತ

ತಂತ್ರಜ್ಞಾನದ ವ್ಯವಸ್ಥೆ ವಿಕೇಂದ್ರೀಕೃತ ಆರ್ಥಿಕ, ರಾಜಕೀಯ ವ್ಯವಸ್ಥೆಯೊಂದಿಗೆ ಜಾರಿಗೆ ಬರಬೇಕು ಎಂದು ಸೂಚಿಸಿದರು.

90ರ ದಶಕದ ಸಾಮಾಜಿಕ ಮತ್ತು ಸಾಂಸ್ಕೃತಿಕ ನೋಟದ ಬಗ್ಗೆ ನಡೆದ ಮೂರನೇ ಗೋಷ್ಠಿಯಲ್ಲಿ ಅಪರೂಪವಾಗಿ ಮದುವೆ, ಕುಟುಂಬ, ಸಾಮಾನ್ಯ ನಾಗರೀಕ ಸಂಹಿತೆ ಮತ್ತು ಧರ್ಮದ ಪಾತ್ರದ ಬಗ್ಗೆ ಚರ್ಚೆ ನಡೆಯಿತು. ಸಮಾಜವಾದಿ ಧೋರಣೆ ಹಬ್ಬಿದಂತೆ ಮದುವೆ ಎಂಬುದು ಗಂಡು ಹೆಣ್ಣಿಗೆ ನೀಡುವ ಆರ್ಥಿಕ, ಸಾಮಾಜಿಕ, ದೈಹಿಕ ಭದ್ರತೆ ಎಂಬ ಕಲ್ಪನೆ ಮಾಯವಾಗಿ, ಗಂಡು-ಹೆಣ್ಣಿನ ಮಧ್ಯೆ ಪ್ರೀತಿ-ವಿಶ್ವಾಸಗಳ ಬಂಧನ ಮಾತ್ರವಾಗುತ್ತದೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದ ಸುರೇಂದ್ರ ಮೋಹನ್, ಸುಧಾರಣಾ ಚಳುವಳಿಗಳು ಅಲ್ಪಸಂಖ್ಯಾತರಲ್ಲೇ ಪ್ರಬಲವಾಗಬೇಕು. ಆಗ ಮಾತ್ರ ಸಾಮಾನ್ಯ ನಾಗರೀಕ ಸಂಹಿತೆ ಬಗ್ಗೆ ಚಿಂತಿಸಬಹುದು. ಇಲ್ಲದಿದ್ದರೆ ಹಿಂದುಗಳು ತಮ್ಮ ಕಾನೂನುಗಳನ್ನೇ ನಮ್ಮ ಮೇಲೆ ಹೇರುತ್ತಿದ್ದಾರೆಂಬ ಭಾವನೆ ಅಲ್ಪ ಸಂಖ್ಯಾತರಲ್ಲಿ ಬಲವಾಗುತ್ತದೆ ಎಂದು ವಾದಿಸಿದರು. ಹಿಂದೂಗಳ ವಿವಿಧ ಗುಂಪುಗಳಲ್ಲೇ ವಿಧವಿಧವಾದ, ಕೆಲವೊಮ್ಮೆ ಪರಸ್ಪರ ವಿರೋಧವಾದ ಸಾಮಾಜಿಕ-ಧಾರ್ಮಿಕ ಕಟ್ಟುಪಾಡುಗಳು, ಸಂಪ್ರದಾಯಗಳಿರುವಾಗ ಹಾಗೂ ಅವುಗಳನ್ನು ದೇಶದ ನಾನಾ ಭಾಗದ ಹಿಂದೂಗಳು ಮುಂದುವರೆಸಿಕೊಂಡು ಹೋಗುತ್ತಿರುವಾಗ, ಅಲ್ಪಸಂಖ್ಯಾತರನ್ನೂ ಒಳಗೊಂಡು ಎಲ್ಲರಿಗೂ ಸಾಮಾನ್ಯ ನಾಗರೀಕ ಸಂಹಿತೆ ಇರಬೇಕೆಂದು ಅರ್ಥಪೂರ್ಣವಾಗದು ಎಂದು ಆಧಾರಸಹಿತವಾಗಿ ಸುರೇಂದ್ರಮೋಹನ್ ವಾದಿಸಿದರು. 'ಜಾತಿ' ಬಗ್ಗೆ ಮಾತನಾಡುತ್ತಾ, 'ರಾಜ್ಯಶಕ್ತಿ'ಯ ಕೈನಲ್ಲೇ ಹೆಚ್ಚು ಹೆಚ್ಚು ಆರ್ಥಿಕಶಕ್ತಿ ಕೇಂದ್ರೀಕೃತವಾದಾಗ, ಅದರಲ್ಲಿ ದೊಡ್ಡಪಾಲನ್ನು ಪಡೆಯಲು ಜಾತಿಗಳೂ 'ರಾಜಕೀಕರಣ'ಗೊಳ್ಳುವುದು ಅನಿವಾರ್ಯ ಎಂದರು. ಧರ್ಮಗಳು ಅನೇಕಬಾರಿ ಸುಧಾರಣಾ ಚಳುವಳಿಗಳ ಮೂಲಕ ಸಮಾಜವಾದಿ ವ್ಯವಸ್ಥೆಗೆ ತಮ್ಮ ಕಾಣಿಕೆ ಸಲ್ಲಿಸಿವೆ. ಬಸವೇಶ್ವರ, ನಾರಾಯಣಗುರು, ಭಕ್ತಿಪಂಥಗಳು ಪ್ರಮುಖ ಕೆಲಸ ಮಾಡಿವೆ. ಧರ್ಮ ಪೂರ್ಣವಾಗಿ ಸಮಾಜವಾದದ ವಿರೋಧಿ ಎಂದು ಹೇಳುವುದು ಸರಿಯಲ್ಲ ಎಂಬ ಅಭಿಪ್ರಾಯವೂ ವ್ಯಕ್ತವಾಯಿತು.

ಸಮಾಜವಾದಿ ಚಿಂತನೆ ನಿಂತನೀರಾಗಿದೆಯೇನೋ ಎಂಬ ಅನುಮಾನ ಬರುತ್ತಿರುವ ಸಂದರ್ಭದಲ್ಲಿ, ಬೌದ್ಧಿಕವಾದ ಯಾವುದೇ ಪ್ರಯತ್ನವನ್ನು ಹೀಗಳೆಯುವ ಪ್ರವೃತ್ತಿ ಹೆಚ್ಚುತ್ತಿರುವ ಸಂದರ್ಭದಲ್ಲಿ ಹಾಗೂ ಹಳೆಯ ಅನುಭವಗಳ, ಬೆಳವಣಿಗೆಗಳ ಬಗೆ ದೂರಗಾಮಿ ಚಿಂತಿಸಿ ಕಾರ್ಯಕ್ರಮಗಳನ್ನು, ನೀತಿಗಳನ್ನು ರೂಪಿಸುವ ಬಗ್ಗೆ ತಾತ್ಸಾರ

ಮನೋಭಾವ ಹೆಚ್ಚುತ್ತಿರುವಾಗ ಇಂತಹ ಶಿಬಿರ ನಡೆದದ್ದು ಅರ್ಥಪೂರ್ಣವಾಗಿತ್ತು. ವಿವಿಧ ಕ್ಷೇತ್ರಗಳಲ್ಲಿ ಕ್ರಿಯಾಶೀಲರಾದ ಯುವಕರಿಗೆ ಒಂದು ಅಧ್ಯಯನವಾಗುವುದರ ಜೊತೆಗೇ, ಸಮಾಜವಾದಿ ಚಿಂತನೆಯನ್ನು ಮುಂದಕ್ಕೊಯ್ಯಲು ಇಂತಹ ಶಿಬಿರಗಳು ಸಹಕಾರಿಯಾದಾವು. ಹೊಸ ಹೊಸ ಬೆಳವಣಿಗೆಗಳ ಸಂದರ್ಭದಲ್ಲಿ ಅವುಗಳ ಮೌಲ್ಯ ಮಾಪನ ಮಾಡಿ, ಸಮಾಜವಾದಿ ಚಳುವಳಿಯ ಅರೆಕೊರೆಗಳನ್ನು ತಿದ್ದಿಕೊಳ್ಳುವ, ಹೊಸ ಸ್ಪಂದನವನ್ನು ರೂಪಿಸುವ ಪ್ರಯತ್ನ ನಡೆಯದೇ ಇದ್ದುದೂ ಸಮಾಜವಾದಿ ಚಳುವಳಿಯ ಮಿತಿಗಳಲ್ಲಿ ಒಂದು. ಇಷ್ಟೆಲ್ಲಾ ಹೇಳಿದರೂ, ಒಂದೇ ಶಿಬಿರದಲ್ಲಿ ಇಷ್ಟೊಂದು ಗಹನವಾದ ಕೆಲಸವನ್ನು ಮಾಡಲು ಸಾಧ್ಯ ಎಂಬ ಭ್ರಮೆ ಮಾತ್ರ ಸಂಘಟಕರಲ್ಲಿ ಇರಲಿಲ್ಲ. ಇಂತಹ ಸಣ್ಣ ಸಣ್ಣ ಪ್ರಯತ್ನಗಳು ನಡೆಯಬೇಕೆಂಬುದೇ ಅವರುಗಳ ಆಶಯವಾಗಿದೆ.

## ಡ್ಯಾಫೋಡಿಲ್ಸ್

ಹೊಳೆ-ಹಳ್ಳ, ಗುಡ್ಡ-ಬೆಟ್ಟಗಳ ಮೇಲೆ
ಹೊಳೆವ ಒಂಟಿ ಮೋಡದ ಪರಿಯಲ್ಲಿ
ಅಂಡಲೆವ ಏಕತಾನತೆಯ ಮಧ್ಯೆ
ಮೇಘ ಸಂದೇಶ ಸ್ವಾಗತಿಸ ಹೊರಟ ಅತಿಥೇಯ
ಹೇಮ ವರ್ಣದ ಡ್ಯಾಫೋಡಿಲ್ಸ್
ಇಲ್ಲೆಲ್ಲೆಡೆ
ಕೊಳದ ಬದಿಗೆ-ಮರದ ಕೆಳಗೆ
ಮತ್ತದರ ನರ್ತನವು ತಿಳಿಗಾಳಿಯೊಳಗೆ.

ಬೆಳದಿಂಗಳನು ಹೊತ್ತ ಮರ-ಗಿಡಗಳ ಮೇಲೆ
ಮತ್ತೆ ನೀಲಾಕಾಶದೊಳಗೆ ನಕ್ಷತ್ರಗಳ ಸತತ ಶೋಭೆ
ಕಡಲ ಬ್ಯಾಲೆಯ ಉದ್ದಕ್ಕೂ ಪಯಣ

---

ರವೀಂದ್ರಭಟ್ಟ, ಕುಳಿಬೀಡು, ಇಂಗ್ಲಿಷ್ ಉಪನ್ಯಾಸಕ, ಎಸ್.ಜೆ.ಎಂ. ಕಾಲೇಜ್,
ತರೀಕೆರೆ-577228.

ಸಹಸ್ರ-ಸಹಸ್ರ ಸಂಖ್ಯೆಯಲ್ಲಿ
ತಲೆದೂಗುವ ಪರಿ ಕಂಡಾಗ ನನ್ನೀ
ಕಣ್ಣುಗಳು ಪಡೆದದ್ದು ತೃಪ್ತಿ-ತಂಪನ್ನು.

ಇವುಗಳ ವಯ್ಯಾರದ ಹೆಜ್ಜೆಗಳಿಗೆ
ಸಾಗರದಲೆಗಳದ್ದೇ ಗೆಜ್ಜೆ-ತಾಳ
ಅಂಥ ಕಂಪನಿಯೊಳಗೆ ಕವಿ
ಖುಷಿಯನ್ನಲ್ಲದೆ ಬೇರೇನು ಪಡೆಯಬಲ್ಲ ?
ನಾನಾದರೋ ನೋಡುತ್ತ ಅತ್ತ-ಇತ್ತ
ಈ ಸಂಪತ್ತಿತ್ತ ಸಂತೋಷದ ಮೊತ್ತ ಎಷ್ಟು ?
ಅಂತ ಯೋಚಿಸುತ್ತಿದ್ದೆ ಆಗ.

ಈಗ,
ನನ್ನ ಕೊಠಡಿಯ ಈ ಕಿಟಕಿ ಬಳಿ
ನಾನೊಬ್ಬನೇ
ದಿಕ್ಕೆಟ್ಟು ಕುಳಿತು
ಕದಡಿದ ಸ್ಥಿತಿಯಲ್ಲಿದ್ದಾಗ
ಸ್ಪಷ್ಟವಾಗುವುದು ಆ ನೆನಪಿನ ಸುಳಿ
ಏಕಾಂತದೊಳಗೆ ಬಿಚ್ಚಿಕೊಂಡಂತೆಲ್ಲ
ಹಿಗ್ಗುವುದು ಹೃದಯ—
ಮತ್ತದರ ಬಡಿತ ತಾಳವಾಗುತ್ತ
ಹಿಂಬಾಲಿಸುತ್ತದೆ ಡ್ಯಾಫೋಡಿಲ್ಸ ಹೆಜ್ಜೆಗಳನ್ನ.

ಮೂಲ : ವರ್ಡ್ಸ್‌ವರ್ತ್‌ನ ಡ್ಯಾಫೋಡಿಲ್ಸ

ರೂಪಾಂತರ : ರವೀಂದ್ರ ಭಟ್ಟ

## ದೀಪಾವಳಿ

ನಾನು ಮಗುವಿದ್ದಾಗ ಆಟಂಬಾಂಬು ಇರಲಿಲ್ಲ
ಈಗ ರಾಕೆಟ್ಟುಗಳ ದೀಪಾವಳಿ

---

ಸುಮತೀಂದ್ರ ನಾಡಿಗ, 523, ಪದ್ಮನಾಭನಗರ, ಬೆಂಗಳೂರು-560 070.

ಮುಂದುವರೆದಿದೆ ಹೀಗೆ ನಮ್ಮವರ ವಿಜ್ಞಾನ
ಎಲ್ಲಕಡೆ ಸುಡುಮದ್ದು ಸರಹಾವಳಿ

ನಾನು ಸಾಕಿದ ಮಗಳು ಜೂಲಿ ಮುದ್ದಿನ ನಾಯಿ
ಬೊಗಳಿ ಬೊಗಳೀ ತುಂಬ ಸುಸ್ತಾದಳು
ಪ್ರಾಣಿಗಳಿಗೀ ಸದ್ದು ಕಂಡರಾಗುವುದಿಲ್ಲ
ಬೇಡವೆನ್ನಿರಿ ಎಂದು ನೆಕ್ಕಿ ಹೇಳಿದಳು.

ಬೀದಿಯಲಿ ಮಕ್ಕಳಿಗೆ ಓಡಾಟವೇ ಕಷ್ಟ
ದೊಡ್ಡವರಿಗೂ ಹಿಂಸೆ ಬೇರೆ ಕಾಟ
ಸುಡುಮದ್ದು ಹೊಗೆಯಲ್ಲಿ ಗಾಳಿಯಲ್ಲಿ ಹಾಳಾಗಿ
ಏನಾದರೇನಂತೆ ಹಬ್ಬದಾಟ.

ಪಟಾಕಿ ಅಂಗಡಿಯವರು ದುಡ್ಡು ಮಾಡುವರೀಗ
ಪಟಾಕಿ ಫ್ಯಾಕ್ಟರಿಗೆ ಹೆಚ್ಚು ಲಾಭ
ಲೈಸೆನ್ಸು ಕೊಡುವವರು ದುಡ್ಡು ತಿಂದರೆ ಏನು
ಎಷ್ಟು ತಿಂದರೂ ಈಗ ಅಷ್ಟು ಹಬ್ಬ.

ಹಬ್ಬವೆಂದರೆ ಏನು ಉಣ್ಣುವುದೆ ಹಬ್ಬವೆ ?
ಹೊಸಬಟ್ಟೆ ಉಡುವುದೆ ಹಬ್ಬವೇನು ?
ಕಣ್ಣು ಬೆಳಕಿನ ಹಬ್ಬ ಕಿವಿಯು ಶಬ್ದದ ಹಬ್ಬ
ಬೆಂಕಿಯಿಲ್ಲದೆ ಹಬ್ಬ ಹಬ್ಬವೇನು ?

ಸದ್ದು ಮಕ್ಕಳಿಗಿಂತ ದೊಡ್ಡವರಿಗೇ ಬೇಕು
ದೊಡ್ಡವರದಲ್ಲವೆ ರಾಜ್ಯ ಭಾರ ?
ಬೀದಿ ಬೀದಿಯ ಸದ್ದು ಕಿವಿಯುಗಡಚಿಕ್ಕುವರು
ಸುಮ್ಮಗಿಲ್ಲವೆ ಹೇಳಿ ನಮ್ಮ ಸರ್ಕಾರ ?

ಬೇಡರಿಗೆ ತಡೆಯುಂಟೆ ಬೇಟೆಯಾಡುವುದಕ್ಕೆ
ನೆಮ್ಮದಿಯು ಭಂಗವಿದು ಪೌರುಷದ ರಂಗ
ಬೇಡವೆನ್ನಿರಿ ಎಂದು ನೆಕ್ಕಿ ಹೇಳಿತು ಸಾಯಿ
ಬೇಡವೆಂದಿತು ನನ್ನ ಅಂತರಂಗ.

—ಸುಮತೀಂದ್ರ ನಾಡಿಗ

ಶೂದ್ರ

ಅವಲೋಕನ

# ಅಂತರಂಗದ ಪುಟಗಳು

—ಡಾ॥ ಅನುಪಮ ನಿರಂಜನ

ಜೀವನದ ಅನುಭವದ ಗ್ರಹಿಕೆ ಮತ್ತು ಅಭಿವ್ಯಕ್ತಿಗಳೆರಡರಲ್ಲೂ ಶ್ರೀಮತಿ ವೈದೇಹಿ ವಿಶಿಷ್ಟರಾದವರು. ಆದ್ದರಿಂದಲೇ ಅವರ ಕತೆಗಳಲ್ಲಿ ವಿಶೇಷ ಸೆಳೆತವಿದೆ. ಮಹಿಳೆ ಎಂಬ ಕಾರಣಕ್ಕೆ ಇವರಿಗೆ ಆದ್ಯತೆ ನೀಡಬೇಕಾದ ಅಗತ್ಯವೂ ಇಲ್ಲ. ಯಾಕೆಂದರೆ ಇವರ ಕತೆಗಳು ಕನ್ನಡದ ಯಾವ ಒಳ್ಳೆಯ ಲೇಖಕನ ಬರಹದೊಂದಿಗೆ ಬೇಕಾದರೂ ಸ್ಪರ್ಧಿಸಬಲ್ಲ ಗುಣವನ್ನು ಪಡೆದುಕೊಂಡಿವೆ.

ಗೃಹಿಣಿಯ ಸೀಮಿತ ಬದುಕಿನ ಚೌಕಟ್ಟಿನಲ್ಲಿ ವೈದೇಹಿಯವರ ಹಾಗೆ ತೀವ್ರವಾಗಿ ಸ್ಪಂದಿಸಬಲ್ಲ ಲೇಖಕಿಯರು ನಮ್ಮಲ್ಲಿ ಅಪರೂಪ. ಉತ್ತರ ಕನ್ನಡ ಜಿಲ್ಲೆ ಮತ್ತು ಪಶ್ಚಿಮ ಕರಾವಳಿಯ ಆಡುಭಾಷೆಯ ಸೊಬಗು, ಅವರ ಕತೆಗಳಲ್ಲಿ ಜೀವಂತ. ಭಾಷೆಯ ಜಾನಪದ ಜೀವಂತಿಕೆಯ ಜೊತೆಗೆ, ಬದುಕಿನ ವಿವಿಧ ರಂಗಿನಂಗಳಗಳೂ ನಮಗೆ ಇಲ್ಲಿ ಇದಿರಾಗುತ್ತವೆ. ವಾಸ್ತವವನ್ನು ಇಡಿಯಾಗಿ ಗ್ರಹಿಸುತ್ತ, ಅದರ ಸಂಕೀರ್ಣತೆಗಳೆಲ್ಲವನ್ನೂ ಅರ್ಥೈಸುತ್ತಾ ಆದರೂ ಹೊರನೋಟಕ್ಕೆ ಬಲು ಸರಳವಾಗಿಯೇ ಕಾಣುವಂತಹ ಕಥಾನಕ, ಇಲ್ಲಿನ ಕತೆಗಳೆಲ್ಲದರ ಗುಟ್ಟು.

ಕತೆಗಳೆಲ್ಲದರ ವಸ್ತು ನಾವು ನೀವು ದಿನಾ ಕಾಣುವಂಥ ವಿಷಯಗಳೇ. ಗ್ರಾಮೀಣ ಬದುಕಿನ ಓರೆಕೋರೆಗಳೆಲ್ಲ ಇಲ್ಲವೆ. ಆದರೆ ಅದನ್ನು ನಿರ್ವಹಿಸುವ ಬಗೆ. ಭೂತ ವರ್ತಮಾನಗಳೊಂದಿಗೆ ಬೆಸುಗೆ ಹಾಕುವ ರೀತಿ, ಪಾತ್ರಗಳು ಹಸಿಹಸಿಯಾಗಿ ಮೇಲೆದ್ದು ಬರುವ ಮೋಡಿ, ಮೆಚ್ಚುವಂಥದು. ಸನ್ನಿವೇಶಗಳ ಚಿತ್ರೀಕರಣದಲ್ಲಿ ಲೇಖಕಿ ಪ್ರತಿಯೊಂದು ಸಣ್ಣಪುಟ್ಟ ವಿವರಗಳಿಗೂ ವಿಶೇಷ ಗಮನ ಕೊಡುತ್ತಾರೆ. ಒಬ್ಬ ಒಳ್ಳೆಯ

---

ಅಂತರಂಗದ ಪುಟಗಳು (ಕಥಾಸಂಕಲನ) ಲೇಖಕಿ : ವೈದೇಹಿ
ಪ್ರಕಾಶಕರು. ಅಕ್ಷರ ಪ್ರಕಾಶನ. ಸಾಗರ 577401 ; ಪುಟ 140 : ಬೆಲೆ 10 ರೂ.

---

ಡಾ॥ ಅನುಪಮ ನಿರಂಜನ, 'ಕಥೆ' 515, 7ನೇ ಮೆಯಿನ್, 5ನೇ ಬ್ಲಾಕ್, ಜಯನಗರ ದಕ್ಷಿಣ
ಬೆಂಗಳೂರು–560041

ಚಲನಚಿತ್ರ ನಿರ್ದೇಶಕ, ಒಂದು ಸನ್ನಿವೇಶ ಚಿತ್ರಿಸುವಾಗ ಪಾತ್ರಗಳ ವೇಷಭೂಷಣ, ಹಾವಭಾವ, ಮಾತು, ಸುತ್ತಲಪರಿಸರ, ಇವೆಲ್ಲಕ್ಕೂ ಮಹತ್ವ ಕೊಡುವ ಹಾಗೆ. ಲೇಖಕಿ ಯಾವ ಪಾತ್ರದ ಬಗ್ಗೆಯೂ ವಕಾಲತ್ತು ವಹಿಸದೆ, ಸ್ಥಿತಪ್ರಜ್ಞೆಯ ಹಾಗೆ ದೂರ ನಿಂತು, ವಿವರಗಳನ್ನಷ್ಟೆ ಕೊಡುತ್ತಹೋಗುವುದು. ಆದರಿಂದ ಹೊಸ ಅರ್ಥ ಸ್ಫುರಿಸುವುದು ಈ ಕತೆಗಳ ಪ್ರಮುಖ ಗುಣ. ಯಾವ ಕತೆಯಲ್ಲೂ ಅಸಹಜವಾದ ಆವೇಶ, ಅಬ್ಬರಗಳಿಲ್ಲ. ಕತೆಗಳ ಆಕೃತಿಯ ಬಗ್ಗೆಯೂ ಲೇಖಕಿ ವಿಶೇಷ ಕಾಳಜಿ ವಹಿಸುತ್ತಾರೆ. ಆದ್ದರಿಂದಲೇ ಅವರ ಕತೆಗಳು ಕಲಾತ್ಮಕ ದೃಷ್ಟಿಯಿಂದಲೂ ಅಚ್ಚುಕಟ್ಟಾಗಿವೆ.

"ಅಂತರಂಗದ ಪುಟಗಳು" ಎಂಬ ಈ ಕಥಾಸಂಕಲನದಲ್ಲಿ ಒಟ್ಟು 15 ಕತೆಗಳಿವೆ. ವೈವಿಧ್ಯದ ದೃಷ್ಟಿಯಿಂದ ಅತ್ಯುತ್ತಮವೆನಿಸಿದ ನಾಲ್ಕು ಕತೆಗಳ ಬಗ್ಗೆ ಮಾತ್ರ ಬರೆದು ಉಳಿದುವನ್ನು ಓದುಗರು ತಾವಾಗಿಯೇ ಸವಿಯಲು ಬಿಡಲಾಗಿದೆ.

ಹಳ್ಳಿಗಾಡಿನ ಶಾಂತ ಸಂಸಾರದಲ್ಲಿ ಬಾಬಿ ಎಂಬ ಹೆಂಗಸು ಬಂದು ಎಬ್ಬಿಸುವ ಬಿರುಗಾಳಿಯ ಕಥೆ 'ಒಂದು ಅಪರಾಧ ತನಿಖೆ'. ಬಾಬಿ ಮತ್ಯಾರೂ ಅಲ್ಲ. ಆ ಮನೆಯಲ್ಲಿ ಅಡುಗೆಗಿದ್ದ ನಾಗಮ್ಮನ ಮಗಳು. ನಾಗಮ್ಮನ ಗಂಡ ಸಿಟ್ಟು ಬಂದರೆ. "ಒಲೆಯಿಂದ ಕೊಳ್ಳಿ ಎಳೆದೇ ಹೆಂಡತಿಯನ್ನು ಬೆದರಿಸಿಕೊಂಡು ಬರುವ ಗಂಡು ಗಂಡಸಂತೆ." ಬಾಬಿ ಗುರುಟು ದೇಹದ, ಗೊಗ್ಗರು ಹಲ್ಲಿನ, ಇಲಿ ಬಾಲದ ಜಡೆಯ, ತಲೆಹರಟೆ ಹುಡುಗಿ. ಇವಳು ಮದುವೆಯಾದದ್ದು ಎರಡನೆಯ ಸಂಬಂಧಕ್ಕೆ. ಗಂಡನ ಬಗ್ಗೆ 'ಅದಕ್ಕೆ ಊರು ತುಂಬಾ ಮೋವು ಚೇರೆ' ಎಂದು ಹೇಳಬಲ್ಲಂಥ ದಿಟ್ಟತನ. ಇವಳು ಹದಿನೆಂಟು ವರ್ಷದ ಅನಂತರ ತನ್ನ ಮಗಳ ಮದುವೆಗೆ 'ಹೇಳಿಕೆ' ಕೊಡಲು ಬರುತ್ತಾಳೆ. ಮನೆಯ ಮಗಳು ಕುಸುಮಕ್ಕ ಗಂಡನನ್ನು ಬಿಟ್ಟು ಬಂದಿರುವ ಪ್ರಸಂಗ. ಈಗಾಗಲೇ ಮನೆಯಲ್ಲಿ ಎಲ್ಲರ ಸಂಬಂಧಗಳೂ ಅಸ್ತವ್ಯಸ್ತವಾಗಿವೆ. ಇಂಥ ಪರಿಸ್ಥಿತಿಯಲ್ಲಿ "ನೀವು ಗಂಡನ್ನ ಬಿಟ್ಟು ಬಂದದ್ದು ತಿಳಿಯಿತು" ಎಂಬ ಕುಹಕದೊಂದಿಗೆ ಬಾಬಿ ಆರಂಭಿಸಿದಾಗ ಮನೆಯಲ್ಲಿ ಅಲ್ಲೋಲಕಲ್ಲೋಲ. ಬಾಬಿ ಕಪ್ಪು ಕೋಟು ತೊಟ್ಟದ್ದು, ಕುಸುಮಕ್ಕ ಪಂಜರದಲ್ಲಿ ನಿಂತದ್ದು - ಈ ಫ್ಯಾಂಟಸಿ, ಕಥೆಗೆ ವಿಚಿತ್ರ ಮೆರುಗನ್ನು ನೀಡುತ್ತದೆ.

'ಭೂತ' ಕತೆಯ ನಾಯಕಿ ಪಾರ್ವತಿ. ಐದು ಹೆಣ್ಣು ಮಕ್ಕಳಲ್ಲಿ ದೊಡ್ಡವಳು. ಮನೆಗೆಲಸ ಮಾತ್ರವಲ್ಲ. ಏತದಿಂದ ನೀರು ಮೊಗೆದು ತೋಟಕ್ಕೆ ಹಾಕುವುದರಲ್ಲಿ. ದೋಂಟಿ ಹಿಡಿದು ಹಣ್ಣು ಕೀಳುವುದರಲ್ಲಿ, ಹಳ್ಳದಲ್ಲಿ ಈಜಾಡುವುದರಲ್ಲಿ ನಿಸ್ಸೀಮೆ.

ಅವಳ ಸಪ್ಪುರ ದೇಹದಲ್ಲಿ ಇರುವ ಸಾಮರ್ಥ್ಯ ಎಣಿಕೆಗೆ ಸಿಕ್ಕದ್ದು.' 'ಗೇರುಹಣ್ಣು ಗೇರು ಬೀಜ ಎಲ್ಲಾ ಕೊಡ್ತೆ. ಮತ್ತೆ ರಂಜದ ಹೂವು ಹೆಕ್ಕಿ ದೇವರಿಗೆ ಕೊಡುವ' ಇಡೀ ಗ್ರಾಮೀಣ ಬದುಕಿನ ಚೆಲುವು, ಅದು ಒಡಲಲ್ಲಿಟ್ಟುಕೊಂಡ ದುಃಖಗಳು. ವ್ಯಕ್ತಿಗತ ಸಂಕಟಗಳು ಒಂದಕ್ಕೊಂದು ಹೆಣೆದುಕೊಳ್ಳುತ್ತ ಕಥೆ ದಟ್ಟವಾಗುತ್ತದೆ. ಮುಂದೆ ಹಲವು ವರ್ಷಗಳ ನಂತರ ಇದೇ ಪಾರ್ವತಿ ಗಂಡ ಬಿಟ್ಟವಳಾಗಿ ಮತ್ತೆ ಮನೆ ಸೇರಿದಾಗ ತಾಯಿಗೆ ದುಃಖಕ್ಕಿಂತ ಸಂತೋಷವೇ ಆಗುವಾಗಿನ ಕ್ರೌರ್ಯ ನೋಡಿ. "ಅವಳು ಮದುವೆ ಆಯಿಂಡು ಹೋದಮೇಲೆ ಗದ್ದೆ ತೋಟ ಕೇಳ್ತವರಿಲ್ಲದ ಹಂಗಿತ್ತು. ಈಗ ಗಂಡು ಗಂಡನು ಮನೆಯಲ್ಲಿದ್ದ ಹಂಗೆ ಆಯಿತಲ್ಲ!" ಹವ್ಯಕ ಕನ್ನಡದ ಅನೇಕ ಪದಗಳು ಬೇರೆ ಭಾಗಗಳ ಜನರಿಗೆ ಅರ್ಥವಾಗುವುದಿಲ್ಲ. ಕತೆಯ ಮೂಲದ್ರವ್ಯವನ್ನು ಹೀರಿಕೊಳ್ಳುವಲ್ಲಿ ಇದು ಅಡ್ಡಿಯಾಗುವ ಅಪಾಯವಿದೆ. ಈ ಪದಗಳಿಗೆ ಸಮಾನಾರ್ಥವನ್ನು ಕೊಟ್ಟಿದ್ದರೆ ಚೆನ್ನಾಗಿತ್ತು.

'ಅವಲಂಬಿತರು' ಕತೆಯ ಲವಲವಿಕೆ ನೋಡಿ. ಮನೆಗೆಲಸದ ಹುಡುಗಿ ಅಹಲ್ಯಳ ಬಗ್ಗೆ ಬರೆಯುತ್ತಾ 'ಹುಡುಗಿಗೆ ಹದಿನೈದು ವರ್ಷವಿರಬಹುದು. ಮಸಿಕೆಂಡ. ಎತ್ತರಕ್ಕೆ ಮೈಕೈ ತುಂಬಿಕೊಂಡಿತ್ತು. ಮುಖದಲ್ಲಿ ಭೂಮಿಯನ್ನು ಗೋಲಿಮಾಡಿ ಆಡಿಸುವ ಉತ್ಸಾಹವಿತ್ತು' ಎನ್ನುತ್ತಾ ಲೇಖಕ ಉತ್ಸಾಹ ಪುಟಿಯುವ ಅಹಲ್ಯೆಯನ್ನು ರಂಗದ ಮೇಲೆ ಬಿಡುತ್ತಾರೆ. ಉದ್ಯೋಗಸ್ಥೆ ಶಾರದಾ, ತನ್ನ ಮಗುವನ್ನು ನೋಡಿಕೊಳ್ಳಲು ಈ ಹುಡುಗಿಯನ್ನು ಕರೆತಂದರೂ ಕ್ರಮೇಣ ಮನೆಗೆಲಸವನ್ನೆಲ್ಲ ಅವಳಿಗೇ ವಹಿಸಿ, ಕಡೆಗೆ ರಾತ್ರಿಯ ಹೊತ್ತು ಮಗುವಿನ ತೊಟ್ಟಿಲನ್ನು ಹಜಾರಕ್ಕೆ ವರ್ಗಾಯಿಸುತ್ತಾಳೆ. ಇಷ್ಟಾದರೂ ಆಫೀಸಿಗೆ ಹೋಗುವಾಗ ಎಣ್ಣೆ, ತುಪ್ಪ, ಬೆಣ್ಣೆ, ತಿಂಡಿ ಎಲ್ಲ ಬೀಗ ಹಾಕಿ ಆಗ ಅಹಲ್ಯಳ ನೋವಿನ ಮಾತು. 'ನಂಗೆ ಅದನ್ನೆಲ್ಲ ಉಂಡು ಗೊತ್ತಿಲ್ಲ ಹೌದು. ಆದರೆ ಬೀಗದಲ್ಲಿಟ್ಟು ಬಂದೋಬಸ್ತು ಮಾಡುವಷ್ಟು ಕಳ್ಳಿಯಲ್ಲ! ಹೀಗೆ ಶಾರದ ಕ್ಷಣ ಕ್ಷಣಕ್ಕೂ ಹುಡುಗಿಯ ಶೋಷಣೆ ಮಾಡುತ್ತ, ತಾನು ಅವಳಿಗೆ ವಿಶೇಷ ಸವಲತ್ತು ಒದಗಿಸಿದ್ದೇನೆ ಎಂದು ಭ್ರಮೆಪಟ್ಟುಕೊಳ್ಳುತ್ತಾಳೆ. ಮಧ್ಯಮ ವರ್ಗದ ಎಲ್ಲ ಮನೆಯ ದ್ವಂದ್ವಗಳೂ ಈ ಕತೆಯಲ್ಲಿ ಹೆಪ್ಪುಗಟ್ಟುತ್ತವೆ.

"ಬಸ್ಸಿನೊಳಗೊಂದು ಪ್ರಜಾಪ್ರಭುತ್ವ" ತುಂಬ ಖುಷಿ ಕೊಡುವ ಕತೆ. ಬಸ್ಸಿನಲ್ಲಿ ಜನರನ್ನು ತುಂಬುತ್ತಾ ನಡೆದ ಕಂಡಕ್ಟರ, ಅವನಿಗೆ ಒತ್ತಾಸೆಯಾದ ಡ್ರೈವರ್, ಅವರ ಮೋಸಗಳು. ಇದಕ್ಕೆ ಮೂಕ ಪ್ರೇಕ್ಷಕರಾಗಿರುವ ಪ್ರತಿಭಟಿಸಲಾರದ ಜನ. ಇವರ ಮಧ್ಯೆ ಸಣ್ಣ ಚಕಮಕಿಗಳಾದರೂ ಅದು ಸ್ಫೋಟಾವಸ್ಥೆಗೆ ಬರುವುದು ಕ್ರುದ್ಧ ಮನುಷ್ಯ, "ಯಾಕೆ? ನಿಮಗೆ ಯಾರಿಗೂ ಇವರು ಮಾಡುವುದು ತಪ್ಪು ಅನಿಸುತ್ತಿಲ್ಲವೇನು?

ಊರು ತಲುಪುವುದು ಊಟಮಾಡಿ ನಿದ್ರೆ ಮಾಡುವುದು ಅಷ್ಟು ಮುಖ್ಯವಾ ನಿಮಗೆ? ಎಲ್ಲ ಬನ್ನಿ, ನುಗ್ಗಿ ಕ್ಯಾಬಿನ್ನಿಗೆ" ಎಂದು ಕಹಳೆ ಮೊಳಗಿಸಿದಾಗಲೇ, ಜನರ ನಿಷ್ಕ್ರಿಯತೆಯನ್ನು, ಹೇಡಿತನವನ್ನು, ಪ್ರಜಾಪ್ರಭುತ್ವವನ್ನು ಗೇಲಿಮಾಡುತ್ತಲೇ ಹೊಸ ಅರ್ಥಗಳನ್ನು ಪಡೆದುಕೊಳ್ಳುವ ಈ ಕತೆ ಅತ್ಯಂತ ಮಹತ್ವದ್ದು.

ಇತರ ಕತೆಗಳು ವ್ಯಾಪ್ತಿಯಲ್ಲೂ ಕಲಾವಂತಿಕೆಯಲ್ಲೂ ಸಾಮಾನ್ಯವೆನಿಸುವಂಥವಾದರೂ ವೈದೇಹಿಯವರ ಎಲ್ಲ ಕತೆಗಳಲ್ಲೂ ಹೆಣ್ಣೇ ಪ್ರಮುಖ ಪಾತ್ರವಾಗಿರುವುದು ಗಮನಾರ್ಹ. ಇಲ್ಲಿ ಯಾವ ಹೆಣ್ಣೂ ಆದರ್ಶ, ತ್ಯಾಗಗಳ ಅಳುಬುರುಕು ಅಸಹಾಯ ಪಾತ್ರವಲ್ಲ. ಹೆಣ್ಣಿನ ವೈಭವೀಕರಣವೂ ಇಲ್ಲಿಲ್ಲ. ಎಲ್ಲರೂ ವಿಭಿನ್ನ ವ್ಯಕ್ತಿತ್ವಗಳ ವಾಸ್ತವ ಪಾತ್ರಗಳು. ಎಲ್ಲರೂ ಕೆಳಸ್ತರ ಮತ್ತು ಕೆಳ ಮಧ್ಯಮವರ್ಗದಿಂದ ಬಂದ ಹೆಂಗಸರೇ ಆದರೂ ಇವರ ಧೈರ್ಯ ದಿಟ್ಟತನ ಬೆರಗು ಹುಟ್ಟಿಸುವಂಥದು. ಹೆಂಗಸರ ಶೋಷಣೆ ಇತ್ಯಾದಿ ಅಬ್ಬರದ ಮಾತಾಡದಿದ್ದರೂ ಹೆಣ್ಣಿನ ನೋವು ತಣ್ಣಗೆ ಮೂಲ ಸ್ರೋತ್ರವಾಗಿ ಎಲ್ಲ ಕತೆಗಳಲ್ಲೂ ಹರಿಯುತ್ತದೆ. ಅತಿ ಭಾವುಕತೆಯಿಲ್ಲದ ನಿರ್ಲಿಪ್ತ ಬರೆವಣಿಗೆಯಿಂದಲೇ ವೈದೇಹಿಯವರ ಕತೆಗಳು ಎತ್ತರದ ಮಜಲನ್ನು ಮುಟ್ಟುತ್ತವೆ. ●

## ವಿದಾಯ

ಪ್ರಿಯೆ ಬಿಟ್ಟುಕೊಡು :
ನಿನ್ನ ವ್ಯಾಮೋಹದಿಂದ ;
ಇನುವರೆಗೂ ನಿನ್ನ
ಪೋಷಕತೆಗೆ
ಶುರುಳಾಗಿದ್ದ ಈ
ವಿಶ್ವಾಮಿತ್ರ ! ಇಗೋ ಹೊರಟೆ.

ನಿನ್ನಲ್ಲಿ ಪಡೆದ ರಾಗ ಲಯ
ಎಬ್ಬಿಸಿದ ಪ್ರಳಯ
ಭ್ರೂಣ ರೂಪ ; ಇರಲಿ ನಿನ್ನ ಬಳಿಯೆ
ಗಳಿಸಲೇಬೇಕು ವಸಿಷ್ಠ ಬಲ
ಇದು ಅಚಲ :
ವಿಶ್ವವಾಖಲೆಗೆ ನನ್ನ ಹಠ !

- 2 -

ನನ್ನ ತಪದ ಬೆಳಕೆಲ್ಲ ಸೋರಿ
ನೆಲಮಾಳಿಗೆ ಸೇರಿ
ಕುಗ್ಗಿ ನರಳಿದವು ಸುತ್ತ
ಪೊರೆಬೆಳೆದು ;
ಇದೀಗ ಒಡೆವಿದೆ ಕೋಶ
ಬೆಳಕಿಗೆ ಚಿಟ್ಟೆ ಉತ್ಸಾಹ !

ಹಡಗು ಸಿದ್ಧವಿದೆ
ಕಡಲು ನಂಬಿಸಿದೆ
ಎದೆಯಲ್ಲಿ ನಕ್ಷೆ ಪಡಿಮೂಡಿದೆ
ಹುಡುಕಲೇಬೇಕು
ಸಣ್ಣ ದ್ವೀಪವಾದರೂ
ಕಟ್ಟಕಡೆಗೆ.

ಎಂ. ಎನ್. ವ್ಯಾಸರಾವ್. ಯುಕೋ ಬ್ಯಾಂಕ್, ಎಂ. ಜಿ. ರಸ್ತೆ, ಬೆಂಗಳೂರು-560001

ಪಡಬಿಟ್ಟ ಮೊದಲಲ್ಲಿ
ಅಸ್ಪಷ್ಟ ಮನಸ್ಸು;
ತೊಗಲು ಸ್ಪರ್ಶದ ನೆನಪು
ಆಶ್ರಮದ ಹೂಗಾಳಿ
ಎಬ್ಬಿಸಿದ ಕಿಚ್ಚು
ನರನರಕ್ಕೂ ಅಮೂರ್ತನೋವು.

ಈ ಕಡಲು ಅಜ್ಞಾತದ ಕಾಡು
ನಿರಭ್ರನೀಲಿ ನೀರು ಬೆಳಕು
ಸದ್ಯದ ಸಖಿ
ಉತ್ತರ ಮುಖಿ
ಆಗಾಗ ಬೆದರಿಸುವ
ಬಿರುಗಾಳಿ

ದಿನಗಳುರುಳಿದ್ದೇ ಹೀಗೆ
ಮುಂದಿನದು ಹೇಗೊ ?
ಬಿಡದ ಮೋಡ ಗಾಳಿ ಮಳೆ
ಹೊಯ್ದಾಡುವ ಅಲೆ
ಪುಕ್ಕ ಬಿಟ್ಟಾಸೆಗಳಿಗೆ
ಕಾದ ರಣ ಹದ್ದು ಥೇಗೆ !

- 3 -

ಗೊತ್ತು ನನಗೆ ಈ ಸಂಚೆಲ್ಲ
ಮೇಲ್ಮನೆಯ ರಾಜಕೀಯ
ನನ್ನ ನಿರ್ನಾಮದಲ್ಲಿ
ಅವರಿಗೇನೋ ಖುಷಿ ;
ಗೊತ್ತುಪಡಿಸುವೆ
ನಾನೆಂಥ ಹಠಮಾರಿ !

ಕಣ್ಣಗಲಕ್ಕೆ ಕಡಲೊಂದೆ
ಸದ್ಯದ ಬದುಕು
ಹುಟ್ಟುವ ಭರವಸೆಗಳೂ
ಅರೆಕ್ಷಣದ ಅಲ್ಪಾಯು
ನನ್ನಸ್ತ್ರಗಳೇ ನನ್ನ ತಿನ್ನುವ ಶತ್ರು
! ಒಳಗಿರುವ ತೇಜವೆ ಶಕ್ತಿ ನೀಡು

ಕಣ್ಣ ಪಟ್ಟಿ ಬಿಗಿದು
ಕಾಡಲ್ಲಿ ಬಿಟ್ಟವನ ಸ್ಥಿತಿಯೆ !
ತೆವಳಿಯೂ ತೆವಳದಂತಿರುವ
ಹೆಳವ ಹಡಗೆ ;
ಎತ್ತ ನಡಿಗೆ ? ದಿಕ್ಕುಗಾಣದೆ
ಸಾಗರವೆ ಸಂಕೋಲೆ

ಸುದೂರದಲ್ಲಿ ಕಂಡದ್ದೇನು ?
ನಡುಗಡ್ಡೆ ? ಬೆಳ್ಳಿ ಚುಕ್ಕೆ ?
ಆಕಾಶದಿಂದಿಳಿದು
ತೇಲಿ ಬರುವ ತೆರೆಯೆ !
ಅದೃಷ್ಟದ ಹೊರೆಯೆ? ಅಲ್ಲ!
ವ್ಯೂಹ ರಚಿಸಿದೆ ಸುತ್ತ ದಟ್ಟ ಮಂಜಿನ ತೆರೆ

- 4 -

ಸುತ್ತ ಆವರಿಸಿ ದಿಕ್ಕು
ತಪ್ಪಿಸುವ ಶಕ್ತಿಗಳೆ ಅಲ್ಲೆ ನಿಲ್ಲಿ
ದಿಕ್ಕು ಕಾಣಲೇ ಬೇಕಿಲ್ಲ
ಇದ್ದಲ್ಲೆ ದಕ್ಕಿಸುವುದು ಗೊತ್ತು
ಈ ನಡುಗಡಲಲ್ಲೆ ಸೃಷ್ಟಿಸುವೆ
ನನ್ನದೇ ಜಗತ್ತು

ನನ್ನ ಮೈಗುಂಟು ಮಣ್ಣಿನ ಪವಾಡ
ಸ್ಪರ್ಶಕ್ಕಿದೆ ಕಳೆ ತರುವ ಭಾಗ್ಯ
ಕತ್ತಲಲ್ಲಿ ಬೆಳಕಿನ ಮೊಟ್ಟೆ
ಹೊರಳಿದೆ ಹೊಸ ದಿಗಂತಕ್ಕೆ
ಒಪ್ಪಿಕೊಳ್ಳಲಿ ಸ್ವರ್ಗಮರ್ತ್ಯ
ನನ್ನ ಲೋಕಕ್ಕೆ ನನ್ನದೇ ಸೂರ್ಯ !

—ಎಂ. ಎಸ್. ವ್ಯಾಸರಾವ್

# ರಾಮಚಂದ್ರದೇವರ ಕಥಾ ಸಂಕಲನ

—ರಮಜಾನ್ ದರ್ಗಾ

ಕಲೆಯ ಸೃಷ್ಟಿ ಮುಖ್ಯವಾಗಿ ಎರಡು ಪ್ರಕಾರಗಳಲ್ಲಿ ಆಗುತ್ತದೆ. ಒಂದು ವಾಸ್ತವತೆಯಲ್ಲಿ ಸಾರ್ವತ್ರಿಕತೆಯನ್ನು ತುಂಬುವುದರ ಮೂಲಕ. ಎರಡನೆಯದಾಗಿ ಅಘಟಿತ ಘಟನೆಗಳಲ್ಲಿ ವಾಸ್ತವತೆಯನ್ನು ಎರಕ ಹೊಯ್ಯುವುದರ ಮೂಲಕ. ಇನ್ನು ಅಘಟಿತ ಘಟನೆಗಳನ್ನು ಕುರಿತು ಹೇಳುವುದೆಂದರೆ ಕಲ್ಪಿಸುವುದೆಂದೇ ಅರ್ಥ. ವಾಸ್ತವದ ಹಿನ್ನಲೆ ಇಲ್ಲದೆ ಮನುಷ್ಯ ಕಲ್ಪಿಸಲು ಸಾಧ್ಯವಿಲ್ಲ. ಕಲ್ಪನೆ ಎಂಬುದು ಒಂದು ವಸ್ತುವಿನ ವೈಭವೀಕರಣದ ಮೂಲಕ (ಕವಿಸಮಯದಲ್ಲಿ ತೆಂಗಿನಮರ ಕಲ್ಪವೃಕ್ಷವಾದಂತೆ, ಹಸು ಕಾಮಧೇನುವಾದಂತೆ) ಇಲ್ಲವೆ ಎರಡು ಅಥವಾ ಎರಡಕ್ಕಿಂತ ಹೆಚ್ಚು ವಸ್ತುಗಳ ಹಿನ್ನಲೆಯಲ್ಲಿ ಹೊಸದೊಂದನ್ನು (ಕಲೆಯಲ್ಲಿ) ಸೃಷ್ಟಿಸುವುದು. ಗಣಪತಿಯನ್ನು ಸೃಷ್ಟಿಸಿದವನ ಕಲ್ಪನೆಗೆ ಹಿನ್ನಲೆಯಾಗಿ ಎರಡು ವಾಸ್ತವಗಳಾದ ಮನುಷ್ಯ ಮತ್ತು ಆನೆ ಇರಲೇಬೇಕು. ಇಂಥ ಕಲ್ಪನೆಗಳಲ್ಲಿ ವಾಸ್ತವತೆಯನ್ನು ಎರಕ ಹೊಯ್ಯುವುದರ ಮೂಲಕ ಮೂಗೇಲ ಮತ್ತು ಇತರ ಕಥೆಗಳು ಸೃಷ್ಟಿಯಾಗಿವೆ.

'ಈ ಕೃತಿಗಳು ವ್ಯಕ್ತಿ ಕೇಂದ್ರಿತವಲ್ಲ. ಇವುಗಳಲ್ಲಿ ಪಶುಪಕ್ಷಿಗಳು, ಮರಗಳು, ಹಾವುಗಳು, ಕೋತಿಗಳು, ಅಜಗರಗಳು ಪಾತ್ರವಾಗುತ್ತವೆ. ಈ ಪ್ರಾಣಿ ಪಕ್ಷಿಗಳನ್ನು ಕೃತಿಕಾರರು ಮನುಷ್ಯರಂತೆ ಮತ್ತು ತಮಗೆ ಸಮಾನರಂತೆ ಕಾಣುತ್ತಾರೆ' ಎಂದು ಲೇಖಕರು ಮುನ್ನುಡಿಯಲ್ಲಿ ತಿಳಿಸಿದ್ದಾರೆ. ಈ ಕಲ್ಪನೆಯಲ್ಲಿ ಯುಗ ಧರ್ಮವ ಎರಕ ಹೊಯ್ಯಲಾಗಿದೆ. ಇಲ್ಲಿನ ಮನಸ್ಸುಗಳು ವಾಸ್ತವತೆಯ ತಾಪದಲ್ಲಿ ಬೆಂದು ಹೋಗುತ್ತವೆ. ಸಂಬಂಧಗಳು ತಮ್ಮೆಲ್ಲ ಪರಿಗಳನ್ನು ಬಿಚ್ಚಿಕೊಳ್ಳುತ್ತ ಬೆತ್ತಲಾಗಿ ಬಿಡುತ್ತವೆ. ಯಂತ್ರ ನಾಗರೀಕತೆಯಲ್ಲಿ ಹೃದಯವೆಂಬುದು ಮಾಂಸದ ಮುದ್ದೆಯಾಗುತ್ತದೆ. ಒಳ್ಳೆಯದನ್ನೇ

---

**ಮೂಗೇಲ ಮತ್ತು ಇತರ ಕಥೆಗಳು**

ರಾಮಚಂದ್ರ ದೇವ - ಜೈರಾದೆ ಪ್ರಕಾಶನ: ಬೆಂಗಳೂರು. ಬೆಲೆ: 7 ರೂ.

---

ರಮಜಾನ್ ದರ್ಗಾ, ಉಪಸಂಪಾದಕ, ಪ್ರಜಾವಾಣಿ, ನಂ. 75, ಎಂ. ಜಿ. ರಸ್ತೆ, ಬೆಂಗಳೂರು-1.

ಬಯಸುವ ಒಳ ತೋಟದೊಂದು ಸೋತು ಕೊನೆಗೆ ಪರಿಸ್ಥಿತಿಯ ಸಮರ್ಥನೆ ಮಾಡಿಕೊಳ್ಳುವುದರ ಮೂಲಕ ಸಮಾಧಾನ ಪಟ್ಟುಕೊಳ್ಳುತ್ತದೆ. ಒಳ್ಳೆಯತನ ಪೆದ್ದತನವೆನಿಸಿ ಕೊನೆಗೆ ಕ್ರೌರ್ಯದ ಮಾರ್ಗ ಹಿಡಿಯುತ್ತದೆ.

ಎಂಟು ಕತೆಗಳ ಈ ಸಂಕಲನದಲ್ಲಿ ವಿಷಾದ ಸ್ಥಾಯಿಯಾಗಿದೆ. 'ಯಾತ್ರೆ'ಯ ಗೋವಿಂದ ಮತ್ತು 'ನಕ್ಷತ್ರವನ್ನು ಮುಡಿದವಳು' ಕಥೆಯ ಚೆಲುವೆಯನ್ನು ಬಿಟ್ಟರೆ ಯಾವ ಪಾತ್ರಗಳೂ ಬದುಕಿನ ಗೊಂದಲದಲ್ಲಿ ಸಿಕ್ಕಿ ಹಾಕಿಕೊಳ್ಳದೆ ಬದುಕಿನ ಜಾಡನ್ನು ಹಿಡಿದು ಮುಂದೆ ಸಾಗುತ್ತವೆ. ಈ ಎರಡು ಕಥೆಗಳು ಮತ್ತು 'ಅಪರಾಧಿ ನಾನಲ್ಲ' ಕಥೆಯಲ್ಲಿನ ಗೊಂದಲಗಳು ಯಾವುದೆ ಪರಾಕಾಷ್ಠೆಯನ್ನು ಮುಟ್ಟುವಲ್ಲಿ ಸೋಲುವುದರಿಂದ ಅಪೂರ್ಣವೆನಿಸುತ್ತವೆ. ಆದರೆ 'ಯಾತ್ರೆ'ಯ ನಾಯಕ ಕನಸಿನ ಜಗತ್ತಿನಲ್ಲೇ ಮುಳುಗಿ ಹೋದರೆ 'ನಕ್ಷತ್ರ ಮುಡಿದವಳು'ನಲ್ಲಿನ ಸಮಾಜ ಕನಸನ್ನು ಕಳೆದುಕೊಂಡು ಬರಡಾಗಿ ನಿಲ್ಲುತ್ತದೆ.

'ಸಂಸಾರ' ಮತ್ತು 'ಕ್ರೌಂಚ' ಕಥೆಗಳಲ್ಲಿ ಒಳದನಿಯೊಂದು ಪಿಸುಗುಟ್ಟುತ್ತಲೇ ತನ್ನ ಕೈಮೀರಿದ ಅನಿಷ್ಟದ ವಾಸ್ತವತೆಯ ವಿರಾಟ ಸ್ವರೂಪಕ್ಕೆ ಬಾಲಂಗೋಚಿಯಾಗುತ್ತದೆ. ಕೈಮೀರುತ್ತಿರುವ ಅಹಿತಗಳು ವರ್ತಮಾನದ ಅನಿವಾರ್ಯತೆಗಳೆಂಬ "ಜ್ಞಾನೋದಯ"ವಾಗುತ್ತ ಹೋಗುತ್ತದೆ. 'ಸಂಸಾರ'ದಲ್ಲಿ ನಾಯಕ ಹಕ್ಕಿಗಳಿಗೆ ತನ್ನ ಮನೆಯಲ್ಲಿ ಮನೆ ಕಟ್ಟಿಕೊಳ್ಳಲು ಹೇಳುತ್ತಾನೆ. ಮುಂದೆ ಒಂದು ದಿನ ಪಾರಿವಾಳದ ಮರಿಯೊಂದು ಹಾರಲು ಹೋಗಿ ತಿರುಗುತ್ತಿರುವ ಫ್ಯಾನಿಗೆ ಬಡಿದು ಸಾಯುತ್ತದೆ. ಆಗ ಪಾರಿವಾಳಗಳು ಆತನ ಜೊತೆ ಆ ಬಗ್ಗೆ ಮಾತನಾಡುವುದಿಲ್ಲ. ಆದರೂ ನಾಯಕ 'ಕಾಯ್ದೆ ಬದ್ಧವಾಗಿ' ಸಮರ್ಥನೆ ಮಾಡಿಕೊಳ್ಳಲು ಪ್ರಾರಂಭಿಸುತ್ತಾನೆ "ಮನೆ ಕಟ್ಟಿಕೊಳ್ಳಿ ಎಂದಷ್ಟೇ ಹೊರತು ನಿಮ್ಮ ಜೀವದ ಜವಾಬ್ದಾರಿ ಹೊತ್ತುಕೊಳ್ಳುತ್ತೇನೆಂದು ನಾವೇನೂ ಒಪ್ಪಿಕೊಂಡಿರಲಿಲ್ಲ" ಎಂದು ಹೇಳುತ್ತಾನೆ. ಇಲ್ಲಿ ಫ್ಯಾನು ಹೊಸ ಅನಿವಾರ್ಯತೆ ಮತ್ತು ಅನಿಷ್ಟದ ಪ್ರತೀಕವಾಗಿ ನಿಲ್ಲುತ್ತದೆ. ಅನಿಷ್ಟವಾದದ್ದನ್ನು ಅನಿವಾರ್ಯವೆಂದು ಪರಿಗಣಿಸುತ್ತ ಹೋದಂತೆ ಮನಸ್ಸುಗಳು ಅರಳುವಿಕೆಯು ಕ್ರಮದಲ್ಲಿ ಕೂಡ ವ್ಯತ್ಯಾಸವಾಗುತ್ತದೆ. ಅದನ್ನು 'ಕ್ರೌಂಚ'ದಲ್ಲಿ ಕಾಣಬಹುದು. 'ಕ್ರೌಂಚ' ರಾಮಾಯಣ ಮತ್ತು ವರ್ತಮಾನಕ್ಕೆ ಸೇತುವೆಯಾಗಿ ನಿಂತಿದೆ.ಮಾನವ ಅಮಾನುಷವಾಗುತ್ತಲೇ ಬಂದಿರುವ ಸೂಚನೆ ಇಲ್ಲಿದೆ.

ಹೊಸ ಪರೆಯುವಲ್ಲೇ ಬೇಡನ ಕಲ್ಲೇಟಿಗೆ ತುತ್ತಾಗುತ್ತದೆ. ಮುಂದೆ ಹೆಣ್ಣು ಕ್ರೌಂಚ ವಿಧವೆಯಾಗಿ ಜಗತ್ತನ್ನು ನೋಡುತ್ತ ಕಷ್ಟ ಸಹಿಸುತ್ತ ಸಾಗುತ್ತದೆ. ಕೊಲೆ

ಗಡುಕರಿಂದ ಪಾರಾಗುವ ಮತ್ತು ಕೊಲ್ಲುವ ಸಾಮರ್ಥ್ಯವುಳ್ಳವನು ಮಾತ್ರ ರಾಜ್ಯಭಾರ ನಡೆಸುವಂಥ ಕಾಲಘಟ್ಟ ತಲುಪುತ್ತದೆ. ರಸ್ತೆಯಲ್ಲಿ ಒಬ್ಬರನ್ನೊಬ್ಬರು ಕೊಲ್ಲುವ ದೃಶ್ಯ ಸಾಮಾನ್ಯವಾಗುತ್ತದೆ. ಆ ವೇಳೆಗೆ ಮುದಿಯಾಗಿದ್ದ ಕ್ರೌಂಚ ಮೆಲ್ಲಗೆ ಕೆಳಗೆ ಇಳಿದು ದಂಗೆಯಲ್ಲಿ ಕೈಕಾಲು ಕಳೆದುಕೊಂಡು ನರಳುತ್ತಿದ್ದ ಮನುಷ್ಯನೊಬ್ಬನ ಮಾಂಸವನ್ನು ಕುಕ್ಕೀ ತಿನ್ನುವುದು. ಹೀಗೆ ವಾಸ್ತವದ ಭಯಂಕರ ಚಿತ್ರಣವನ್ನು ಕತೆಗಾರ ಭೂತ ವರ್ತಮಾನ ಮತ್ತು ಭವಿಷ್ಯದ ಬಣ್ಣಗಳಿಂದ ಚಿತ್ರಿಸುತ್ತಾರೆ.

'ಜೀವ ಪಕ್ಷಿಯ ಕತೆ' ಮತ್ತು 'ಮೂಗೇಲ' ಕತೆಗಳು ಈ ಸಂಕಲನದ ಅತ್ಯುತ್ತಮ ಕತೆಗಳಾಗಿವೆ. 'ಮೂಗೇಲ' ಕತೆ ಪರಿಸ್ಥಿತಿಗೆ ಒಗ್ಗಿಕೊಳ್ಳುತ್ತ ಹೋಗುವ ಮನುಷ್ಯನ ವ್ಯಕ್ತಿತ್ವವನ್ನು ಸೂಕ್ಷ್ಮವಾಗಿ ಹಿಡಿದಿಟ್ಟಿದೆ. ಇಲ್ಲಿ ಮನುಷ್ಯ ವಾಸ್ತವತೆಯ ಬೇಗುದಿಯನ್ನು ಸಹಿಸದೆ ಬೆತ್ತಲಾಗಿ ಬಿಡುತ್ತಾನೆ. ಉದ್ದ ಮೂಗಿನ ಮಗ ಮೂಗೇಲನನ್ನು ತಂದೆಯಾದವನು ಹಣಕ್ಕಾಗಿ 'ವಿಚಿತ್ರ ಪ್ರಾಣಿ' ಎಂದು ಕರೆದು ಪ್ರದರ್ಶನಕ್ಕಿಡುತ್ತಾನೆ. ಆದರೆ ಓದುಗನಿಗೆ ಆತನ ಬಗ್ಗೆ ಸಿಟ್ಟು ಬರದಂಥ ಆರ್ಥಿಕ ಹಿನ್ನೆಲೆಯೊಂದಿಗೆ ಕತೆ ಬೆಳೆಯುತ್ತ ಬಂದಿದೆ.

'ಜೀವ ಪಕ್ಷಿ' ಕತೆಯ ಚೌಕಟ್ಟು ವಿಸ್ತಾರವಾಗಿದ್ದು ಆಳವಾಗಿದೆ. ಓದುತ್ತ ಹೋದಂತೆ ನಾವೆಲ್ಲ ಜೀವ ಪಕ್ಷಿಯ ಬೆನ್ನು ಹತ್ತಿದ್ದೇವೆಂಬ ಭಾವನೆ ಉಂಟಾಗದಿರದು. ಇಲ್ಲಿ ಎಲ್ಲ ಕಾಲ ಮತ್ತು ಮನಸ್ಸುಗಳನ್ನು ಕಲಾತ್ಮಕವಾಗಿ ಹಿಡಿದಿಡಲಾಗಿದೆ. ಮನುಷ್ಯ ತಾನೇ ಕೊಲೆಗೈಯುತ್ತಿರುವುದನ್ನು ಹುಡುಕುತ್ತ ಹೋಗುವ ಕತೆಯಾಗಿದೆ. 'ಅತಿ ಸರಳ', 'ತುಂಬ ಸಂಕೀರ್ಣ' ಎಂದು ಏಕಕಾಲಕ್ಕೇ ಅನಿಸುವ ಮಾನವ ಸಂಬಂಧಗಳ ಹಿನ್ನೆಲೆಯಲ್ಲಿ ಜೀವಪಕ್ಷಿಯೊಂದು ಹಾರಾಡುತ್ತಲೇ ಇರುತ್ತದೆ.

ಅದನ್ನು ಹಿಡಿಯುವ ಆತುರತೆಯಲ್ಲಿ ಕಾಲಲ್ಲಿ ತುಳಿಯುತ್ತ ಹೋಗುವ ಪರಿಸ್ಥಿತಿ. ಅದು ಸಿಕ್ಕಿತೆಂದು ತಿಳಿದಾಗ ಸಾಯುವ ಪರಿಸ್ಥಿತಿ. ತನ್ನದೇ ಆದ ರೀತಿಯ ಪೌರಾಣಿಕ ಹಿನ್ನೆಲೆಗಳೊಂದಿಗೆ ನಮ್ಮೆಲ್ಲರ ಬದುಕನ್ನು ಹಿಡಿದಿಟ್ಟ ಕತೆ ಇದು.

ಓದಿ: ಗಂಗೆಯ ಶಿಖರಗಳಲ್ಲಿ (ಪ್ರವಾಸ ಕಥನ)

—ಜಿ. ಎಸ್. ಶಿವರುದ್ರಪ್ಪ.

# ಒಳನೋಟ

## ಮೀಸಲಾತಿ ಮತ್ತು ದಲಿತರ ಏಳಿಗೆ

**ಪ್ರಿಯ ಶೂದ್ರ,**

ಪ್ರಜ್ಞಾವಂತರೇ ಹೆಚ್ಚಾಗಿ ಓದುವರೆನ್ನಲಾದ "ಶೂದ್ರ" ಮಾಸಿಕದಲ್ಲಿ "ಮೀಸಲಾತಿ ಮತ್ತು ದಲಿತರ ಏಳಿಗೆ" ಎಂಬ ಸಪ್ಪೆ ಲೇಖನ ಪ್ರಕಟಗೊಂಡದ್ದು ತುಂಬ ವಿಷಾದನೀಯ, ಇಂಥ ವಿಷಯದ ಲೇಖನಗಳು ನಿಮ್ಮ (ನಮ್ಮದೂ ಕೂಡ) ಪತ್ರಿಕೆಯಲ್ಲಿ ಬರಬಾರದೆಂದಲ್ಲ, ಅವಶ್ಯಕವಾಗಿ ಬರಬೇಕು. ಆದರೆ ಅವು ಗಂಭೀರವಾದ ಚಿಂತನೆಯಿಂದ ಕೂಡಿದ್ದರೆ ಅದರಿಂದ ಏನಾದರೂ ಸ್ವಲ್ಪ ಸಾಧಿಸಲು ಸಾಧ್ಯ. ಇಲ್ಲದೇ ಹೋದರೆ ಇಂಥ ಲೇಖನಗಳು ವಾತಾವರಣವನ್ನು ಕಲುಕಿಸಿ ಧೂಳೆಬ್ಬಿಸುವ ಕೆಲಸವನ್ನಷ್ಟೇ ಮಾಡುತ್ತವೆ. ನಮಗೆ ಬೇಕಾಗಿರುವುದು ಎದ್ದ ಧೂಳನ್ನು ನಿರ್ಮಲಗೊಳಿಸುವ ಲೇಖನಗಳು. ಆ ದಿಶೆಯಲ್ಲಿ ಸುಚೇತನ ಸ್ವರೂಪರ ಲೇಖನ ಧೂಳೆಬ್ಬಿಸುವ ಕೆಲಸವನ್ನಷ್ಟೇ ಮಾಡಿದೆಯೆಂದರೆ ತಪ್ಪಿಲ್ಲ.

ಲೇಖಕರೇ ಪ್ರಾರಂಭದಲ್ಲಿ ಹೇಳಿದಂತೆ ಅವರ ಲೇಖನದ ಉದ್ದೇಶ ಹಾಲಿಜಾರಿಯಲ್ಲಿರುವ ಮೀಸಲಾತಿ ನೀತಿಯನ್ನು ಪ್ರಶ್ನಿಸುವದು ಮತ್ತು ಬದಲೀ ವ್ಯವಸ್ಥೆ ನಿರ್ಮಾಣದ ಬಗ್ಗೆ ಕನಸುವುದು. ಆದರೆ ಲೇಖಕರು ಕೇವಲ ಮೀಸಲಾತಿಯನ್ನು ಪ್ರಶ್ನಿಸಿದ್ದಾರೆಯೇ ಹೊರತು ತಮ್ಮ ಕನಸಿನ ಬದಲಿ ವ್ಯವಸ್ಥೆ ಯಾವುದು ? ಏನು ? ಹೇಗೆ ? ಎಂಬುದನ್ನು ಹೇಳದೆ ತಮ್ಮ ಜಾಣತನ ತೋರಿದ್ದಾರೆ.

ನೇರಮಾತಿನಲ್ಲಿ ಹೇಳಬೇಕಾದರೆ, ಲೇಖಕರ ವಾದಗಳೆಲ್ಲ ಅಜ್ಞಾನದ ತಳಹದಿಯ ಮೇಲೇಯೇ ಬೆಳೆದುಕೊಂಡು ಬಂದಿವೆ. ಮೊದಲನೆಯದಾಗಿ ಮೀಸಲಾತಿಯ ಉದ್ದೇಶ ಬದಲಿ ವ್ಯವಸ್ಥೆಯ ನಿರ್ಮಾಣ ಅಲ್ಲವೇ ಅಲ್ಲ. ಏನೂ ಇಲ್ಲದ ದಲಿತರಿಗೆ ಸಂವಿಧಾನದ ಮೂಲಕ ರಾಜಕೀಯ, ಆರ್ಥಿಕ, ಶೈಕ್ಷಣಿಕ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿ ಮುಂದು

---

ಮಾ. ಮ. ಕರಾಳೆ, ರಿಸರ್ವ್ ಬ್ಯಾಂಕ್, ಬೆಂಗಳೂರು-560 001

ಪರಿಯಲು ಕಲ್ಪಿಸಿಕೊಟ್ಟ ಒಂದು ತಾತ್ಕಾಲಿಕ ವ್ಯವಸ್ಥೆ. ಈ ದಿಶೆಯಲ್ಲಿ ಮೀಸಲಾತಿ ಅಸಂಗತ ಸಮಾಜದಲ್ಲಿ ಜನ್ಮ ತಳೆದ ಮತ್ತೊಂದು ಅವಶ್ಯಕ ಅಸಂಗತ. ಮೀಸಲಾತಿಯ ಜನಕರಾದರೂ ಅದನ್ನು ಬದಲೀ ವ್ಯವಸ್ಥೆಯ ಮದ್ದು ಎಂದು ಪರಿಗಣಿಸಿರಲೇ ಇಲ್ಲ. ಡಾ. ಅಂಬೇಡಕರರು ಆಶಿಸಿದ್ದೂ ಅಷ್ಟೆ. ಅವರೇ ದಲಿತರನ್ನುದ್ದೇಶಿಸಿ "ಈ ಮೀಸಲಾತಿಯ ಪ್ರಯೋಜನ ಪಡೆದುಕೊಂಡ ದಲಿತರು ತಮಗಿಂತಲೂ ಹೆಚ್ಚು ವಂಚಿತರಾದ ದಲಿತರ ಸಹಾಯಕ್ಕೆ ಹೋಗಬೇಕು ಹಾಗೂ ಅವರ ಏಳಿಗೆಗಾಗಿ ಪ್ರಯತ್ನಿಸಬೇಕು ಎಂದು ಹೇಳಿದ್ದರು. ದಲಿತರಲ್ಲಿ ಈ ಪ್ರಜ್ಞೆ ದಿನೇ ದಿನೇ ಬೆಳೆಯುತ್ತಿರುವುದನ್ನು ಯಾರಾದರೂ ಕಾಣಬಹುದು. ಇಂದು ಹುಟ್ಟಿಕೊಂಡ ದಲಿತರ ಅನೇಕ ಸಂಘ ಸಂಸ್ಥೆ [illegible]ನವ ಕಿಡಿ ಕಾರುವುದನ್ನು ನೋಡಿದರೆ ಅವರು ಇಲ್ಲಿಯ ಅಸಮಾನತೆ [illegible] ಶೋಷಿತ ವ್ಯವಸ್ಥೆಯನ್ನು ಬಹಳಷ್ಟು ದಿನ ಮೂಕ ಪ್ರೇಕ್ಷಕರಂತೆ ನೋಡುತ್ತ ನಿಂತಿರಲಾರರು. ಬಹುಶಃ ಮೀಸಲಾತಿ ಏನೂ ಇಲ್ಲದ ದಲಿತರಿಗೆ ಅವಶ್ಯಕವಾದ ಆರ್ಥಿಕ, ರಾಜಕೀಯ, ಶೈಕ್ಷಣಿಕ ಹಾಗೂ ಸಾಮಾಜಿಕ ಅಡಿಗಲ್ಲನ್ನು ಹಾಕಲು ಸಹಾಯಕವಾಗಿ ಬದಲೀ ಕಿಡಿಗಳನ್ನೂ ತಯಾರಿಸಲು ಸಹಾಯಕವಾಗಬಹುದೆಂದು ಬಹಳಷ್ಟು ಪ್ರಜ್ಞಾವಂತ ದಲಿತರು ನಂಬಿದ್ದಾರೆ.

ಲೇಖಕರು ಒಂದು ಬಹು ದೊಡ್ಡ ತಪ್ಪನ್ನು ಮಾಡಿದ್ದಾರೆ. ದಲಿತರಿಗೆ ಬೇಕಾದದ್ದು ಔಷಧಿಕೊಟ್ಟು ಗುಣಪಡಿಸಿದ ಹಳೆರೋಗಿಯಲ್ಲ. ಹಳೆರೋಗಿ ಬೇಗ ಸತ್ತಷ್ಟೂ ದಲಿತರಿಗೆ ಒಳ್ಳೆಯದು. ದಲಿತರಿಗೆ ಬೇಕಾದದ್ದು ಈ ಮಣ್ಣಿನಲ್ಲಿ ಮಣ್ಣಾಗಿ ಬೆಳೆದ ಒಬ್ಬ ದಷ್ಟಪುಷ್ಟ ಅಜಾನುಬಾಹು. ಅದೇ ಬದಲೀ ವ್ಯವಸ್ಥೆ. ಎಲ್ಲ ಶೋಷಣೆಗಳಿಂದಲೂ ಮುಕ್ತವಾದ ಎಲ್ಲರನ್ನೂ ಎಲ್ಲ ಹಂತದಲ್ಲೂ ಸರಿಸಮಾನರನ್ನಾಗಿ ನೋಡುವ ಪ್ರೇಮ, ಭ್ರಾತೃತ್ವ ಹಾಗೂ ಸಮಾನತೆಯಿಂದ ಕೂಡಿದ ಸಾಮಾಜಿಕ, ರಾಜಕೀಯ ಹಾಗೂ ಆರ್ಥಿಕ ವ್ಯವಸ್ಥೆ. ಲೇಖಕರು ರೋಗಿಗೆನೇ ಔಷಧಿಕೊಟ್ಟು ರೋಗ ನಿವಾರಿಸಿ ಅವನನ್ನೇ ವ್ಯವಸ್ಥೆಯ ರೂಪದಲ್ಲಿ ಉಳಿಸಿಕೊಳ್ಳಲು ಪಡುತ್ತಿರುವ ಪ್ರಯತ್ನ ಬೂರ್ಜ್ವಾ ಪ್ರಯತ್ನ ಅಲ್ಲವೇ ? ಅದರಿಂದ ದಲಿತರಿಗೆ ಇನ್ನೂ ಹೆಚ್ಚಿನ ಹಾನಿಯಲ್ಲವೇ ? ಬೂರ್ಜ್ವಾಗಳು ದಲಿತ ಪರರೆ ?

ಲೇಖಕರು ತಮ್ಮ ಲೇಖನದಲ್ಲೆಲ್ಲೂ ತಮ್ಮ ಬದಲೀ ವ್ಯವಸ್ಥೆಯ ನಿರ್ಮಾಣದ ಕನಸನ್ನು ಸ್ಪಷ್ಟಪಡಿಸುವ ತೊಂದರೆ ತೆಗೆದುಕೊಂಡಿಲ್ಲ. ಹಾಗೇನಾದರೂ ಅವರು ಮಾಡಿದ್ದರೆ ಆ ಮಾನದಂಡದಿಂದಲೇ ಅವರನ್ನು ಅಳೆಯಬಹುದಿತ್ತು. ಅವರ ಅಥವಾ ಅವರು ಪ್ರತಿಪಾದಿಸಿರುವ ಸಿದ್ಧಾಂತ ಹೊಂದಿದವರ ಕೊಡುಗೆಯನ್ನು ಪ್ರಶ್ನಿಸಬಹುದಿತ್ತು.

ಪ್ರಜ್ಞಾವಂತ ದಲಿತರು ಚಿಂತಿಸುವಂತೆ ದಲಿತರ ನಿಜವಾದ ವಿಮೋಚನೆ ಮೀಸಲಾತಿಯಿಂದ ಅಲ್ಲವೇ ಅಲ್ಲ, ದಲಿತರ ನಿಜವಾದ ವಿಮೋಚನೆ ಇರುವುದು ಜಮೀನಿನ ರಾಷ್ಟ್ರೀಕರಣ, ಆಸ್ತಿಯ ಸರಿಸಮಾನ ಹಂಚಿಕೆ, ಆಸ್ತಿಗಳ ಮೇಲಿನ ಸಾಮಾಜಿಕ ಒಡೆತನ, ಸಾಮಾಜಿಕ ಮೌಲ್ಯಗಳ ಸಂಪೂರ್ಣ ಬದಲಾವಣೆ ಹಾಗೂ ಮನುಷ್ಯರೆಲ್ಲರನ್ನೂ ಒಂದೇ ನಿಟ್ಟಿನಿಂದ ನೋಡುವ ಮೌಲ್ಯಗಳು ಮುಂತಾದ ತತ್ವಗಳಲ್ಲಿ. ಲೇಖಕರು ಇವುಗಳನ್ನು ಯಾವ ಸಿದ್ಧಾಂತದ ಹೆಸರಿನಿಂದಾದರೂ ಕರೆಯಬಹುದು.

ಅವರ ಮೀಸಲಾತಿಯನ್ನು ಬಿಟ್ಟು ಇಲ್ಲಿಯವರೆಗೂ ಆದ ಯಾವ ಆಂದೋಲನವೂ ದಲಿತರನ್ನು ತಲುಪಲೇ ಇಲ್ಲ ಎನ್ನುವುದು ಕನ್ನಡಿಯಷ್ಟೇ ಸತ್ಯ. "ಉಳುವವನೇ ಹೊಲದೊಡೆಯ" ಆಂದೋಲನದಲ್ಲಿ ಇತರರಂತೆ ದಲಿತರು ಭಾಗಿಗಳಾಗಿದ್ದರೂ ದಲಿತರಿಗೆ ಭೂಮಿ ದಕ್ಕಲೇ ಇಲ್ಲ. ಉಳುವವನೇ ಹೊಲದೊಡೆಯ ಎಂಬ ಘೋಷಣೆಯನ್ನೇ ಮುಂದು ಮಾಡಿ ಕರ್ನಾಟಕದಲ್ಲಿ ಲಿಂಗಾಯತರು ಮತ್ತು ಒಕ್ಕಲಿಗರು, ಮಹಾರಾಷ್ಟ್ರದಲ್ಲಿ ಮರಾಠರು, ಆಂಧ್ರದಲ್ಲಿ ರೆಡ್ಡಿಗಳು ಮತ್ತು ಖಮ್ಮಮ್ಮರು, ಇತ್ಯಾದಿಯಾಗಿ ಎಲ್ಲ ರಾಜ ರಾಜ್ಯಗಳಲ್ಲಿ ಹೊಲ ಉಳುತ್ತಿದ್ದ ಜನ ರಾಜ್ಯದ ರಾಜಕೀಯವನ್ನೇ ತಮ್ಮ ಅಂಕುಶದಲ್ಲಿ ತೆಗೆದುಕೊಂಡರು. ದಲಿತರಿಗೆ ಈ ಲಾಭದ ಗಂಧವೂ ಸೇರಲಿಲ್ಲ. ಏಕೆ? ಏಕೆಂದರೆ ದಲಿತರು ಇನ್ನೊಬ್ಬರ ಹೊಲದಲ್ಲಿ ದುಡಿಯುವ ಕೂಲಿಯಾಳುಗಳಾಗಿದ್ದರೇ ಹೊರತು ಟೆನೆಂಟ್ ಆಗಿರಲಿಲ್ಲ. ಮಣ್ಣಿನಲ್ಲೇ ಮಣ್ಣಾದ ದಲಿತರಿಗೆ ಭೂಮಿಯಲ್ಲಿ ಹಕ್ಕು ಸಿಗದಿರುವಂಥ ಪರಿಸ್ಥಿತಿಯಲ್ಲಿ ಇನ್ನು ಅವರಿಂದ ಬಹುದೂರವಾದ ಕೈಗಾರಿಕೆಗಳು, ವ್ಯಾಪಾರಗಳು ಇನ್ನು ಕನಸಿನ ಮಾತೇ ಸರಿ.

ಇಂಥ ಪರಿಸ್ಥಿತಿಯಲ್ಲಿ ಲೇಖಕರು ದಲಿತರಿಗೆ ಮೀಸಲಾತಿಯ ಸೌಲಭ್ಯಗಳನ್ನು ಬಿಟ್ಟುಕೊಟ್ಟು ಯಾವ ದಾರಿ ಹಿಡಿಯಿರಿ ಎನ್ನುತ್ತಾರೋ ಗೊತ್ತಿಲ್ಲ. ಅಲ್ಲೇ ಲೇಖಕರ ಜಾಣತನ ಅಥವಾ ಕುತಂತ್ರವೂ ಅಡಗಿದೆ. ಆದರೆ ಲೇಖಕರು ಉಪಯೋಗಿಸುವ ಬಂಡವಾಳಶಾಹೀ ವ್ಯವಸ್ಥೆ, ಬೂರ್ಜ್ವಾ ವ್ಯವಸ್ಥೆ ಮುಂತಾದ ಪದಗಳನ್ನು ಉಪಯೋಗಿಸುವದನ್ನು ಓದಿದರೆ ಬಹುಶಃ ಅವರು ಕಮ್ಯುನಿಷ್ಟ ಸಿದ್ಧಾಂತವನ್ನೋ, ಲೋಹಿಯಾ ವಿಚಾರವಾದವನ್ನೋ ಹೊಂದಿರಬಹುದೆಂದು ತೋರುತ್ತದೆ.

ಲೇಖಕರಿಗೆ ಅರ್ಥವಾಗುವದೋ ಇಲ್ಲವೋ ಗೊತ್ತಿಲ್ಲ. ಆದರೆ ಇಂಡಿಯಾದಲ್ಲಿ ಕಮ್ಯುನಿಷ್ಟರು ತುಳಿದು ಬಂದ ದಾರಿ ಆಕಸ್ಮಿಕವೇನಲ್ಲ. ಮಾರ್ಕ್ಸ್ ಹೇಳಿದ್ದನ್ನೇ ಯಥಾವತ್ತಾಗಿ ತರಲು ಪ್ರಯತ್ನಿಸಿ ವಿಫಲಗೊಂಡ ಇಂಡಿಯಾದ ಕಮ್ಯುನಿಷ್ಟರು ನಿಧಾನವಾಗಿ

ಯಾವರೂ ಇಲ್ಲಿಯ ವೈಶಿಷ್ಟ್ಯತೆಗಳನ್ನು, ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳುತ್ತಿದ್ದಾರೆ. ಆದ್ದರಿಂದಲೇ ಅವರೂ ಈಗ ಮೀಸಲಾತಿಯನ್ನು ಸಮರ್ಥಿಸುತ್ತಿದ್ದಾರೆ. ಈ ಸಂದರ್ಭದಲ್ಲಿ ಸಿ.ಪಿ.ಆಯ್ (ಎಮ್. ಎಲ್.) ಗುಂಪೂ ಮೀಸಲಾತಿಯನ್ನು ಸಮರ್ಥಿಸುತ್ತಿರುವದು ಇನ್ನೂ ಹೆಚ್ಚು ಅರ್ಥಪೂರ್ಣ. ಪರದೇಶದ ಒಬ್ಬ ಖ್ಯಾತ ಲೇಖಕರು ಹೇಳಿದ ಹಾಗೆ ಇಂಡಿಯಾದಲ್ಲಿ ಕ್ರಾಂತಿ ಬರಬೇಕಾದರೆ ಅದು ಹಂತ ಹಂತವಾಗಿ ಮಾತ್ರ ಸಾಧ್ಯ ಎಂದು. ಆ ದಿಶೆಯಲ್ಲಿ ಅವರು ಇಂದಿನ ಸಧ್ಯದ ಪರಿಸ್ಥಿತಿಯಲ್ಲಿ ಇಲ್ಲಿಯ ಕಮ್ಯುನಿಷ್ಟರು ಪ್ರಜಾಪ್ರಭುತ್ವದ ಅಡಿಯಲ್ಲೇ ಬದಲಾವಣೆ ತರುವ ಪ್ರಯತ್ನವನ್ನು ಅನುಮೋದಿಸುತ್ತಾರೆ. ಡಾ. ಅಂಬೇಡಕರರೂ ಇದನ್ನು ಬಹಳ ಹಿಂದೆಯೇ ಮುನಗಂಡಿದ್ದರು. ಅಂದರೆ ಕ್ಷಿಪ್ರಕ್ರಾಂತಿಯನ್ನು ತರಲು ಇಂಡಿಯಾದ ಸಧ್ಯದ ಸ್ಥಿತಿ ಅನುಕೂಲವಾಗಿಲ್ಲ ಎಂದು. ಇದಕ್ಕೆ ಮುಖ್ಯ ಕಾರಣ ಇಲ್ಲಿಯ ಜಾತಿ ಪದ್ಧತಿ. ಜಾತಿ ಪದ್ಧತಿಯನ್ನು ಮರೆತು ಒಂದು ಶೋಷಣೆಯ ನಿರ್ಮೂಲದ ಸಿದ್ಧಾಂತದ ಕೆಳಗೆ ಒಂದುಗೂಡಲು ಇಲ್ಲಿನ ಬಡವರಿಗೆ ಇನ್ನೂ ಬಹಳ ದಿನ ಬೇಕಾಗುತ್ತದೆ. ಇಂಡಿಯಾದಲ್ಲಿ ದಲಿತರೇತರ ಬಡವರ ಸಂಖ್ಯೆ (ದಲಿತರಿಂದ ಬಡವರೂ ಸೇರಿ) ದಲಿತರಿಗಿಂತ ಜಾಸ್ತಿಯಾಗಿದ್ದರೂ ದಲಿತರೇತರರೆಂದೂ ಜಾತಿಯನ್ನು ಮರೆತು ಬಡತನ, ದಾರಿದ್ರ್ಯಗಳ ಆಧಾರದ ಮೇಲೆ ದಲಿತರೊಂದಿಗೆ ಒಂದಾಗಲು ಪ್ರಯತ್ನಿಸಿಲ್ಲ. ದಲಿತರೇತರ ಬಡವರ ಮುಂದಾಳುಗಳು ಅವರ ಜಾತಿಯ ಶ್ರೀಮಂತರಲ್ಲೇ ಇದ್ದಾರೆ. ಅಂದರೆ ಇಲ್ಲಿಯ ಮೌಲ್ಯಮಾಪನ ಬಡತನವಲ್ಲ, ಜಾತಿ ಎಂದಾಯಿತು. ಆದ್ದರಿಂದಲೇ ದಲಿತರಿಗೆ ಜಾತಿಯ ಆಧಾರದ ಮೇಲೆ ಕೊಡಲ್ಪಟ್ಟ ಮೀಸಲಾತಿಯ ಅವಶ್ಯಕತೆ. ಲೇಖಕರು ಆಳವಾಗಿ ವಿಚಾರಿಸಿದರೆ ಮೀಸಲಾತಿ ದಲಿತರಿಗೆ ಇಂದಿನ ಸಂದರ್ಭದಲ್ಲಿ ರಾಜಕೀಯ ಅಸ್ತ್ರವೂ ಹೌದು. ಆರ್ಥಿಕ ಅಸ್ತ್ರವೂ ಹೌದು,ಹಾಗೂ ಸಾಮಾಜಿಕ ಅಸ್ತ್ರವೂ ಹೌದು. ಮೀಸಲಾತಿ ಇದ್ದುದರಿಂದಲೇ ಇಂದು ದಲಿತರು ತಮ್ಮ ಹಕ್ಕುಗಳಿಗಾಗಿ, ಮಾನವ ಹಕ್ಕುಗಳಿಗಾಗಿ ಪಾರ್ಲಿಮೆಂಟು ವಿಧಾನಸಭೆ ಮುಂತಾದ ಕಡೆಗೆ ಮಾತನಾಡುವ ಸ್ಥಿತಿಯಲ್ಲಿದ್ದಾರೆ. ಮೀಸಲಾತಿ ಇಲ್ಲದಿದ್ದರೆ ದಲಿತರನ್ನು ಮಾತನಾಡಿಸುವವರಾರೂ ಇರುತ್ತಿರಲಿಲ್ಲ ಎಂಬುದಂತೂ ಶತಸಿದ್ಧ. ಇಂದು ದಲಿತರ ಬಗ್ಗೆ ಇಷ್ಟೆಲ್ಲ ಚರ್ಚೆಯಾಗಲು ಕಾರಣ ದಲಿತರು ತಮ್ಮ ಏಳ್ಗೆಯ, ಬಿಡುಗಡೆಯ ಜವಾಬ್ದಾರಿಯನ್ನು ತಾವೇ ತೆಗೆದುಕೊಂಡಿರುವದರಿಂದ ಲೇಖಕರಂತಹ "ಸಹಾನುಭೂತಿಗಳ" (?) ಕೃಪೆಯಿಂದಂತೂ ಅಲ್ಲವೇ ಅಲ್ಲ. ಮೀಸಲಾತಿ ಇದ್ದುದರಿಂದಲೇ ಇಂದು ದಲಿತರು ಅನೇಕ ಕಚೇರಿಗಳಲ್ಲಿ, ಕಾರ್ಖಾನೆಗಳಲ್ಲಿ, ಬ್ಯಾಂಕುಗಳಲ್ಲಿ ಕಾಣಿಸಿಕೊಳ್ಳಲು ಸಾಧ್ಯ, ಶಿಕ್ಷಣ ಪಡೆಯಲು ಸಾಧ್ಯ, ಒಳ್ಳೆಯ ಜೀವನ ನಡೆಸಲು ಸಾಧ್ಯ. ಅಂಥ ಜನ ಇಂದು ಸಾವಿರಾರು ಸಂಖ್ಯೆಯಲ್ಲಿದ್ದಾರೆ. ಅವರೆಲ್ಲರೂ ಬೇರೆನೂ ಮಾಡದೇ ಹೋದರೂ ತಮ್ಮ ತಮ್ಮ ಕುಟುಂಬಗಳ

ಹಾಗೆಯೆ ಜವಾಬ್ದಾರಿಯನ್ನಂತೂ ಹೊತ್ತೇ ಹೊತ್ತುತಾರೆ. ಇದಕ್ಕೆ ಅಪವಾದಗಳಿರಬಹುದು. ಆದರೆ ಈ ಮೀಸಲಾತಿಯ ಲಾಭ ತೆಗೆದುಕೊಂಡು ಮುಂದೆ ಬಂದವರಲ್ಲಿ ನೂರಕ್ಕೆ ಎಂಬತ್ತು ಜನ ಹಳ್ಳಿಯ ವಾತಾವರಣದಿಂದ ಬಂದವರಾದುದರಿಂದ ಅವು ಹಳ್ಳಿಯ ಆರ್ಥಿಕ, ಸಾಮಾಜಿಕ ಹಾಗೂ ರಾಜಕೀಯ ವಾತಾವರಣದ ಮೇಲೆ ಅಗಾಧ ಪರಿಣಾಮ ಬೀರುವುದರಲ್ಲಿ ಸಂದೇಹವೇ ಇಲ್ಲ. ಮೀಸಲಾತಿಯ ಲಾಭ ಪಡೆದುಕೊಂಡು ದಲಿತರು ಯಾವ ಯಾವ ಕ್ಷೇತ್ರವನ್ನು ಪ್ರವೇಶಿಸುತ್ತಾರೋ ಆ ಕ್ಷೇತ್ರಗಳಲ್ಲೆಲ್ಲ ಮೇಲ್ಜಾತಿಯವರ ಗುತ್ತೇದಾರಿ ಕಡಿಮೆಯಾಗುತ್ತದೆ. ಅಂಥ ವಾತಾವರಣ ವರ್ಗ ಹಾಗೂ ವರ್ಣ ಹೋರಾಟಗಳ ನಾಂದಿಗೂ ಕಾರಣವಾಗುತ್ತದೆ. "ಜಾತಿ ಶ್ರಮ ವಿಭಜನೆಯೊಂದೇ ಅಲ್ಲ ಅದು ಕಾರ್ಮಿಕರನ್ನೇ ಜಾತಿ ಆಧಾರದ ಮೇಲೆ ಬೇರೆ ಬೇರೆಯಾಗಿ ವಿಂಗಡಿಸುವ ಅಸ್ತ್ರವೂ ಆಗಿದೆ" ಎಂದು ಡಾ. ಅಂಬೇಡಕರರು ಹೇಳಿದ ಮಾತುಗಳನ್ನು ನೆನೆಸಿಕೊಂಡರೆ ಮೀಸಲಾತಿಯ ಅವಶ್ಯಕತೆಯ ಅರಿವು ಲೇಖಕರಿಗೆ ಸ್ವಲ್ಪವಾದರೂ ಆಗಬಹುದು. ಇಂದು ಗುಜರಾತಿನಲ್ಲೆ ನಡೆಯುತ್ತಿರುವದನ್ನು ನೋಡಿ. ಸವರ್ಣಿಯರೆಲ್ಲ ಮೀಸಲಾತಿಯ ವಿರುದ್ಧ ಒಂದಾಗುತ್ತಿದ್ದರೆ ದಲಿತರೂ ಹಾಗೂ ಹಿಂದುಳಿದ ವರ್ಗಗಳೂ ಮೀಸಲಾತಿಯ ಹೆಸರಿನಲ್ಲೇ ಒಂದಾಗಿ ಬರಲಿರುವ ವರ್ಗ ಹೋರಾಟಗಳಿಗೆ ಬುನಾದಿಯನ್ನೇ ಹಾಕುತ್ತಿದ್ದಾರೆ. ಮೀಸಲಾತಿಯ ಲಾಭ ಪಡೆದುಕೊಂಡವರೇ ಇಂದು ಗುಜರಾತಿನಲ್ಲಿ ಸವರ್ಣಿಯರ ವಿರುದ್ಧ ದಂಗೆ ಎದ್ದಿದ್ದಾರೆಯೇ ಹೊರತು ಸವರ್ಣಿಯ ಬಡವರಲ್ಲ. ಇಂಡಿಯಾದಲ್ಲಿ ಜಾತಿಯೇ ಬಹಳಷ್ಟು ಸಲ ವರ್ಗರೂಪದಲ್ಲಿ ಕಾಣಿಸಿಕೊಳ್ಳುವ ಪರಿಸ್ಥಿತಿ ಇರುವಾಗ ಜಾತಿ ಆಧಾರಿತ ಮೀಸಲಾತಿ ಜಾತಿ ಆಧಾರಿತ ರಾಜಕೀಯ ಇರುವವರೆಗೂ ಅತ್ಯವಶ್ಯಕ. ಅಲ್ಲಿ ಒಬ್ಬ ದಲಿತ ಮಂತ್ರಿ. ಒಬ್ಬ ದಲಿತ ಅಧಿಕಾರಿ ಅಥವಾ ಒಬ್ಬ ದಲಿತ ಲೇಖಕನ ಉದಾಹರಣೆಯ ಅವಶ್ಯಕತೆಯಿಲ್ಲ. ಅವಶ್ಯಕತೆ ಇರುವದು ದಲಿತರು ದಲಿತರ ರಾಜಕೀಯ, ಆರ್ಥಿಕ ಹಾಗೂ ಸಾಮಾಜಿಕ ಆಂದೋಲನಗಳಿಗೆ ಅಡಿಪಾಯವಾಗಬಲ್ಲ ಮೀಸಲಾತಿ. ಇಂಥ ಸಂದರ್ಭದಲ್ಲಿ ದಲಿತರ ಹಿತಚಿಂತಕರಂತೆ ವರ್ತಿಸಿ ಮೀಸಲಾತಿ ಬೇಡೆನ್ನುವವರು ದಲಿತರ ಹಿತಚಿಂತಕರೆಂದೂ ಆಗಲಾರರು. ಬದಲೀ ವ್ಯವಸ್ಥೆಯ ಕನಸಂತೂ ದೂರವೇ ಉಳಿಯಿತು. ಹಾಲಿ ವ್ಯವಸ್ಥೆಯೆಂಬ ರೋಗಿಗೇ ಔಷಧಿಕೊಟ್ಟು ಗುಣಪಡಿಸಲಿಚ್ಛಿಸುವವರು ಬದಲಿ ವ್ಯವಸ್ಥೆಯನ್ನು ಆಶಿಸುತ್ತಾರೆಂದು ನಂಬುವದಾದರೂ ಹೇಗೆ.

—ನೂ. ಮು. ಕರಾಳೆ

# ಕಿ. ರಂ. ರವರ 'ನೀಗಿಕೊಂಡ ಸಂಸ'

'ಸಂಸ' ನಮ್ಮ ಸಾಹಿತ್ಯದ ಸಂದರ್ಭದಲ್ಲಿ ಅತ್ಯಂತ ವಿಚಿತ್ರವಾಗಿ ಬದುಕಿದ ನಾಟಕಕಾರ. ಬ್ರಿಟೀಷರ ಕ್ರೂರ ಆಡಳಿತದಿಂದ ನೊಂದ ವ್ಯಕ್ತಿ ಇವನು. ಹಾಗೆಯೇ ತನ್ನ ಸುತ್ತಲಿನ ಜನರ ನಾನಾ ರೀತಿಯ ಸಣ್ಣತನಗಳಿಂದ ಬೇಸತ್ತವನು. ಈ ದೃಷ್ಟಿಯಿಂದ ಸಂಸನ ಬದುಕಿನ ಒಳಗುದಿಗಳು ಮತ್ತು ಒಳತೋಟಗಳು ಮಾನವೀಯ ಸಂಬಂಧಗಳ ಸುತ್ತ ಪ್ರತಿಕ್ರಿಯಿಸುತ್ತ ಹೋಗುವಂಥವು.

ಕಿ. ರಂ. ನಾಗರಾಜ್‌ರವರು ನಮ್ಮಲ್ಲಿಯ ಕೆಲವೇ ಪ್ರಜ್ಞಾವಂತ ವ್ಯಕ್ತಿಗಳಲ್ಲಿ ಒಬ್ಬರು. ಎಷ್ಟೋ ವರ್ಷಗಳಿಂದ ಕಿ. ರಂ.ರವರ ಮನಸ್ಸಿನಲ್ಲಿ ನರಳುತ್ತಿದ್ದ 'ಸಂಸ' ಇಂದು ಪರಿಣಾಮಕಾರಿಯಾದ ನಾಟಕವಾಗಿ ನಮ್ಮ ಮುಂದಿದೆ. ಪ್ರತಿಯೊಬ್ಬ ಸ್ವಾಭಿಮಾನಿಯನ್ನು ಕೆದಕಿ ಅವನ ಅಂತರಂಗದೊಳಗೆ ಮನೆ ಮಾಡಿ ಕೊಂಡು ಬಿಡುವ ಸಾಧ್ಯತೆಗಳನ್ನು 'ನೀಗಿಕೊಂಡ ಸಂಸ' ಪಡೆದಿದ್ದಾನೆ.

ಸಿ. ಜಿ. ಕೃಷ್ಣಸ್ವಾಮಿಯ ಇತರೆ ಪ್ರಯೋಗಗಳಾದ ಒಡಲಾಳ, ಸನ್ನಿವೇಶ ಮತ್ತು ಮಹಾಚೈತ್ರ ಅಬ್ಬರದ ರಂಗಪ್ರಯೋಗಗಳು. ಆದರೆ 'ನೀಗಿಕೊಂಡ ಸಂಸ' ಕೃಷ್ಣಸ್ವಾಮಿಯ ಪ್ರತಿಭೆಯ ಪ್ರಯೋಗ. (ಈ ಮಾತಿಗೆ ಸಿಟ್ಟಾಗಬಹುದು ಕೃಷ್ಣಸ್ವಾಮಿಯವರು. ಯಾಕೆಂದರೆ 'ಹೆತ್ತ ತಾಯಿಗೆ ಹೆಗ್ಗಣ ಮುದ್ದು' ಎನ್ನುವಂತೆ) ನಾಗಾಭರಣರವರಂಥ ಬುದ್ಧಿವಂತ ನಟನನ್ನು ಸಂಸನ ಪಾತ್ರದಲ್ಲಿ ದುಡಿಸಿಕೊಳ್ಳುವುದು ಕಷ್ಟವಲ್ಲ. ಒಟ್ಟು ಪ್ರಯೋಗವನ್ನು ರಂಗದ ಮೇಲೆ ರೂಪಿಸಿದ ಕ್ರಮವೇ ಚೆನ್ನಾಗಿತ್ತು. ಮೊದಲಿನರ್ಧ ಭಾಗ ಸ್ವಲ್ಪ ಬೋರ್ ಅನ್ನಿಸಿದರೂ ಅದನ್ನು ಪೂರ್ಣ ರೂಪದಲ್ಲಿ ಮುಚ್ಚಿಟ್ಟು ಬಿಡುತ್ತದೆ ವಿರಾಮದ ನಂತರದ ನಾಟಕ. ಸಂಸನ ದುರಂತಗಳ ಗಾಢ ರೂಪವನ್ನು ಇಲ್ಲಿ ಕಾಣಬಹುದು. ಒಟ್ಟು 'ಸಂಸ' ರಂಗದ ಮೇಲೆ ಸ್ವಗತರೂಪದಲ್ಲಿಯೇ ಕಾಣುವುದರಿಂದ ಪ್ರೇಕ್ಷಕರ ಮನಸ್ಸಿನ ಮೇಲೆ ಅವನೆಲ್ಲ ವಿಷಾದಗಳು ಅಚ್ಚಳಿಯದೆ ಉಳಿದುಬಿಡಲು ಸಾಧ್ಯವಾಗಿದೆ. ಈ ದೃಷ್ಟಿಯಿಂದ ನಾಗಾಭರಣ 'ತಬರ'ನ ಪಾತ್ರದ ನಂತರ ಪರಿಣಾಮಕಾರಿಯಾಗಿ ಕಾಣಿಸಿಕೊಂಡ ಪಾತ್ರ 'ಸಂಸ'.

ಕರ್ನಾಟಕದಲ್ಲಿ ಜೀವಂತವಾಗಿ ಕಾಣಿಸಿಕೊಳ್ಳುವ ಪಾತ್ರಗಳೆಂದರೆ ವ್ಯಕ್ತಿ ಒಂದು ಮತ್ತು ವ್ಯಕ್ತಿ ನಾಲ್ಕು. ರಂಗದ ಮೇಲೆಯೂ ಈ ಪಾತ್ರಗಳಲ್ಲಿ ಲಿಂಗರಾಜು ಮತ್ತು ಗಂಗಾಧರರವರು ಲವಲವಿಕೆಯಿಂದ ನಟಿಸಿದ್ದಾರೆ. ಇವರಿಗೆ ಪೂರಕವಾಗಿ ರಂಗ ವಿನ್ಯಾಸವನ್ನು ಸಿ.ಜಿ.ಕೆ. ಮತ್ತು ಶಶಿಧರ ಅಡಪ ಅರ್ಥಪೂರ್ಣ ರೀತಿಯಲ್ಲಿ ರೂಪಿಸಿದ್ದಾರೆ. ಲೋಕೇಶ್‌ರವರ ಬೆಳಕು ಚೊಕ್ಕವಾಗಿತ್ತು. ಒಟ್ಟಿನಲ್ಲಿ ರಂಗಸಂಪದದ ಈ ನಾಟಕ ನಮ್ಮನ್ನು ಹುಚ್ಚೆಬ್ಬಿಸುವ ಪ್ರಯೋಗ.

—ಸಿದ್ಧಾರ್ಥ

## ಸುದ್ದಿಯ ಗುದ್ದಾಟ

**ವಿಜಯಾ**

'ವಿಜಯಾ' ಎಂದರೆ ಗೆಲುವು ಎಂದು ಎಲ್ಲರಿಗೂ ಗೊತ್ತು. ಆದರೆ ಕರ್ನಾಟಕದ ಸಾಂಸ್ಕೃತಿಕ ಸಂದರ್ಭವಲ್ಲಿ ಅತ್ಯಂತ ಪರಿಚಯದ ಈ 'ವಿಜಯಾ'ರವರು ಯಾರಿಗೆ ತಾನೇ ಗೊತ್ತಿಲ್ಲ. ಗೊತ್ತಿಲ್ಲದವರಿಗೆ 'ಇಳಾ'ದ ವಿಜಯಾ. 'ರೂಪತಾರ'ದ ವಿಜಯಾ ಎಂದಾಗ ಗೊತ್ತು ಎಂದು ತಲೆದೂಗಬಹುದು.

ಸಾಹಿತ್ಯ ಕ್ಷೇತ್ರದ 'ಗೂಂಡಿ' (ಗೂಂಡಾದ ಸ್ತ್ರೀಲಿಂಗ ರೂಪ) ಎಂದಾಗ ಹುಸಿ ಮುನಿಸು ತೋರಿಸುವರು. ಟ್ರಿಮ್ಮಾಗಿ ಡ್ರೆಸ್ ಮಾಡಿಕೊಂಡು ಗೌರಮ್ಮನ ರೀತಿಯಲ್ಲಿ ಬರುವ ವಿಜಯಾರವರಿಗೆ ವಯಸ್ಸು ಆಗುವುದಿಲ್ಲ ಎಂದು ಒಳಗೊಳಗೆ ಗೊಣಗಾಡುತ್ತ ಇರುವ ಹುಡುಗಿಯರಿಗೆ ಕೊರತೆಯಿಲ್ಲದಿರಬಹುದು. ನಾನು ಹುಡುಗಿಯಾಗಿದ್ದರೂ ಗೊಣಗಿಕೊಳ್ಳುತ್ತಿದ್ದೆ.

ಯಾರು ಏನೇ ಒಳ್ಳೆಯ ಕೆಲಸ ಮಾಡಲಿ ಅಲ್ಲಿ ನಗುತ್ತ ಕೂಡಿಕೊಳ್ಳುವ ವಿಜಯಾ ತಮ್ಮೆಲ್ಲ ಆಂತರಿಕ ನೋವುಗಳನ್ನು ಮರೆಯಲು 'ಲವಲವಿಕೆ'ಮಾಧ್ಯಮವಾಗಿರಬಹುದು. ಒಂದೆರಡು ವಾರಗಳ ಹಿಂದೆ ವಿಚಾರ ಸಂಕಿರಣವೊಂದರಲ್ಲಿ ವಿಜಯಾರವರು ಬೆಳೆಸಿದ ಹುಡುಗನೊಬ್ಬ "ವಿಜಯಮ್ಮ ತುಂಬ ಮುದ್ದಾಗಿ ಕಾಣ್ತಾರೆ ಅಲ್ಲವಾ ಸಾರ್" ಎಂದಾಗ "ಹೌದು" ಎಂದಿದ್ದೆ. ಕಾರಣವಿಷ್ಟೇ : ಉದ್ದನೆಯ ಜಡೆಯಿಂದ 'ತುರುಬಿ'ಗೆ ಬಂದಿದ್ದರು. ಅಭಿಮಾನದಿಂದ ಇವರಿಗೆ ಸನ್ಮಾನ ಮಾಡುವ ಎಂದರೆ ವಿಜಯಾರವರ ವಯಸ್ಸೇ ಗೊತ್ತಾಗುವುದಿಲ್ಲ.

ವಿಶ್ವ ಕನ್ನಡ ಮೇಳದ ಗೋಷ್ಠಿಯೊಂದರಲ್ಲಿ 'ಮೇಳ'ವನ್ನು ಪ್ರತಿಭಟಿಸಿ ಬಂಧನಕ್ಕೆ ಒಳಗಾದ ಗೆಳೆಯರಿಗೆ ಬೆಂಬಲ ಸೂಚಿಸಿ ಮಾತಾಡಿದಾಗ ಸಾವಿರಾರು ಜನರ ಅಭಿಮಾನದ ಚಪ್ಪಾಳೆಯನ್ನು ಗಿಟ್ಟಿಸಿದರು.

## ರಾಮಚಂದ್ರಶರ್ಮ ಬಿ. ಸಿ.

ರಾಮಚಂದ್ರಶರ್ಮರು ಕವಿಯಾಗಿ ಕರ್ನಾಟಕದ ಸಾಹಿತ್ಯ ಪ್ರಿಯರಿಗೆ ಗೊತ್ತು. ಆದರೆ ಇವರಷ್ಟು ಹಾಸ್ಯ ಪ್ರವೃತ್ತಿಯವರು ಮತ್ತೊಬ್ಬರಿರಲಾರರು. ಅದರಲ್ಲೂ ಎಲ್ಲರನ್ನು ತುಂಟತನದಿಂದ ಗೇಲಿ ಮಾಡುತ್ತ ಜೀವಂತವಾಗಿಡುವ ಜಾಣ್ಮೆಯನ್ನು ಪಡೆದಿದ್ದಾರೆ. ಶರ್ಮರವರು ವಿದೇಶದಿಂದ ಬಂದ ಮೇಲೆ ಏನನ್ನೋ ಕಳೆದುಕೊಂಡವರ ಹಾಗೆ ಮತ್ತು ಎಲ್ಲರೂ ತಮಗಿಂತ ಮುಂದೆ ಹೋಗಿ ಬಿಟ್ಟಿದ್ದಾರೆ ಎಂಬ ಭ್ರಮೆಯಿಂದ ಪರದಾಡುತ್ತಿದ್ದರು. ಯಾವ ಸಭೆಗೆ ಹೋದರೂ ಸಹ 'ವಿದೇಶ'ದ ಪ್ರಸ್ತಾಪ ಬಂದೇ ಬರುತ್ತಿತ್ತು. ಇತ್ತೀಚೆಗೆ ಅದು ಮರೆಯಾಗಿದೆ. ಸಂತೋಷದ ವಿಷಯ. ಅರವತ್ತರ ಗಡಿಯನ್ನು ಮುಟ್ಟುತ್ತಿರುವ ಶರ್ಮರವರು ಚೂಟಿಯಿಂದ ಮಾತಿಗೆ ತೊಡಗುವ ಕ್ರಮವೇ ಆರೋಗ್ಯ ಪೂರ್ಣವಾದದ್ದು. ಆದರೆ ಇವರ ಮಾತು ಅರ್ಥವಾಗದ ಮಂದಿಗೆ 'ತಮ್ಮ ಕಾಲೆಳೆಯುತ್ತಿದ್ದಾರೆ' ಎಂದು ತಿಳಿಯುವುದು ಉಂಟು. ಒಮ್ಮೊಮ್ಮೆ ಆರಾಮವಾಗಿ ಎಳೆಯುವುದೂ ಉಂಟು.

ಇತ್ತೀಚೆಗೆ ಬೆಂಗಳೂರಿನ ಯಾವುದೇ ಸಾಹಿತ್ಯಕ ಸಮಾರಂಭ ಶರ್ಮರಿಲ್ಲದೇ ಜೀವ ಪಡೆಯುವುದಿಲ್ಲ. ಶರ್ಮರವರನ್ನು ಮತ್ತಿಗೇರಿಸಬೇಕಾದರೆ ಕಾವ್ಯದ ಬಗ್ಗೆ ಮಾತ್ರ ಮಾತಾಡಬೇಕು. ಇವರ ಮಗ **ನಟರಾಜಶರ್ಮ** ಒಳ್ಳೆಯ ಕಲಾವಿದ. ಶರ್ಮರಿಗೆ ಇದು ಖುಷಿಯ ವಿಷಯ. ಯಾವ ತಂದೆಗೆ **ಖುಷಿಯಾಗುವುದಿಲ್ಲ.**

## ಅಂಕಣ

ಇದು ವಿಚಿತ್ರ ಸಮಾಜ. ಎಂತೆಂಥವರೋ ಇದ್ದು ಬಿಡುತ್ತಾರೆ. ರಾಕ್ಷಸರಾಗಿಯಲ್ಲ, ಪುಂಡರಾಗಿ ಅಲ್ಲ. ಮನುಷ್ಯರಾಗಿ. ಅಂಥ ಅಪರೂಪದ ವ್ಯಕ್ತಿ ಅಂಕಣ. (ವೆಂಕಣ್ಣ, ಅಂಕಣ ಆಗಿದ್ದೇ ಸ್ವಾರಸ್ಯದ ಸಂಗತಿ) ಈ ಮನುಷ್ಯನಿಗೆ ಸಾಹಿತ್ಯ, ಕಾವ್ಯವೆಂದರೆ ಪಂಚಪ್ರಾಣ. ವೃತ್ತಿ ಬಟ್ಟೆ ಹೊಲಿಯುವುದು. ಅಂಗಡಿಯ ಹೆಸರು 'ಲಂಕೇಶ್ ಹೊಲಿಗೆಯ ಅಂಗಡಿ'. ಇದು ಲಂಕೇಶ್‌ರವರಿಗೆ ಗೊತ್ತಿಲ್ಲ. ಅಂಕಣ ತಿಳಿಯಪಡಿಸುವ ಪ್ರಚಾರದ ವ್ಯಕ್ತಿಯಲ್ಲ. ಇತ್ತೀಚೆಗೆ ವಿಶ್ವ ಕನ್ನಡ ಮೇಳದ ಸಮಯದಲ್ಲಿ ಹಾರೋಹಳ್ಳಿ (ಕನಕಪುರದ ಹತ್ತಿರ)ಯ ಹತ್ತಿರ ಮುದುಕನೊಬ್ಬ ಸೌದೆಯ ಹೊರೆ

ಯನ್ನು ಹೊರಲಾರದೆ ಹೋಗುತ್ತಿದ್ದನಂತೆ. ಅವನ್ನು ಕಂಡು ಮುದುಕನನ್ನು ಸೌದೆಯ ಬೆಲೆ ಕೇಳಿದನಂತೆ. ಮುದುಕ ಆರು ರೂಪಾಯಿ ಹೇಳಿದನಂತೆ. ತಕ್ಷಣ ಮುದುಕನಿಗೆ ಆರು ರೂಪಾಯಿ ಕೊಟ್ಟು ಹೊರೆಯನ್ನು ಅಲ್ಲಿಯೇ ಬಿಸಾಕಿಸಿ ಮನೆಗೆ ಬಂದನಂತೆ. ಇದನ್ನು ಅಂಕಣ್ಣನ ಗೆಳೆಯರಾದ ಜರಗನಹಳ್ಳಿ ಶಿವಶಂಕರ್ ಹೇಳಿದಾಗ ಆಶ್ಚರ್ಯ ವಾಯಿತು. ಇವರೆಲ್ಲ ಕೂಡಿ ಗದ್ದಲವಿಲ್ಲದೆ ರಾಜ್ಯೋತ್ಸವ ಆಚರಿಸುವ ಕ್ರಮವೇ ಮಾದರಿಯಾದದ್ದು. ಇತ್ತೀಚೆಗೆ ಇವರು ಮನೆಗೆ ಬಂದಿದ್ದರು. ಅಂಕಣ್ಣ ತುಂಬ ಚೆನ್ನಾಗಿ ಹಾಡಿದರು. ಗೆಳೆಯ ಡಿ. ಆರ್. ನಾಗರಾಜ್ ಇದ್ದ. ಆಗ ನಾಗರಾಜ್ ವಿಮರ್ಶೆಯ ಮತ್ತಿನಿಂದಿಳಿದು ಹಾಡನ್ನು ಸವಿದಿರಬಹುದು.

**'ಅಂಕಣ್ಣ'ರವರ ಕಾವ್ಯವೇದಿಕೆಯಲ್ಲಿ ಶೂದ್ರದಲ್ಲಿ ಕಾವ್ಯ ರಚನೆ ಸ್ಪರ್ಧೆ ಏರ್ಪಡಿಸುತ್ತಿದ್ದೇವೆ. ಒಟ್ಟು ಎರಡು ಪದ್ಯಗಳನ್ನು ಆರಿಸಲಾಗುವುದು. ಒಂದು ಪದ್ಯಕ್ಕೆ ಇನ್ನೂರು ರೂಪಾಯಿ. ಪದ್ಯ ಕಳಿಸಲು ಕೊನೆಯ ದಿನಾಂಕ ಫೆಬ್ರವರಿ 28.**

## ಸ್ಪಾರ್ಂಗ್ ಇಂಡಿಯಾ

ನಮ್ಮಲ್ಲಿ ಬಹುಪಾಲು ಸಣ್ಣ ಪತ್ರಿಕೆಗಳು ಭ್ರಷ್ಟಗೊಂಡ ಪತ್ರಿಕೆಗಳು. ಕೇವಲ ಜಾಹಿರಾತಿಗಾಗಿ ಹಾಗೂ ಅವರಿವರನ್ನು ಬ್ಲಾಕ್‌ಮೇಲ್ ಮಾಡಿ ದುಡ್ಡು ಕೀಳುವ ಪತ್ರಿಕೆಗಳೇ ಜಾಸ್ತಿ. ಇವುಗಳ ಚರಿತ್ರೆಯ ಬಗ್ಗೆ ಬರೆಯಲು ಹೊರಟರೆ ಪತ್ತೇದಾರಿ ಕಾದಂಬರಿಯ ವಿಷಯವಾಗಬಹುದು. ಇಂಥದರ ನಡುವೆಯೂ ನಮ್ಮ ಗ್ರಾಮಾಂತರ ಪ್ರದೇಶದಿಂದ ಬರುವ ಕೆಲವು ಪತ್ರಿಕೆಗಳು ತುಂಬ ಸಾರ್ಥಕವಾದ ಕೆಲಸವನ್ನು ಮಾಡುತ್ತಿವೆ. ಅವುಗಳಲ್ಲಿ ಮುಖ್ಯವಾಗಿ ಬೆಂಗಳೂರು ಜಿಲ್ಲೆ ಹೊಸಕೋಟೆಯಿಂದ ಕಳೆದ ಐದಾರು ವರ್ಷಗಳಿಂದ ಬರುತ್ತಿರುವ 'ಸ್ಪಾರ್ಂಗ್ ಇಂಡಿಯಾ' ಅತ್ಯಂತ ನಿರ್ಭಿಡೆಯಿಂದ ಬರುತ್ತಿದೆ. ಪತ್ರಿಕೆಯ ಹೆಸರು ಮೊದಲು ಪೇಲವಾಗಿ ಕಾಣುತ್ತಿತ್ತು. ಆದರೆ ಅದರ ಸತ್ವ ಎಲ್ಲವನ್ನು ಮುಚ್ಚಿಟ್ಟಿದ್ದೆ. ಇಲ್ಲಿ ಸಾಹಿತ್ಯ ಮತ್ತು ರಾಜಕೀಯ ಹಾಗೂ ಒಮ್ಮೊಮ್ಮೆ ನಮ್ಮೆಲ್ಲರನ್ನು ಗೇಲಿ ಮಾಡುವ ಲೇಖನಗಳು ಬರುತ್ತವೆ. ಇದು ಹದಿನೈದು ದಿನಕ್ಕೊಮ್ಮೆ ಬರುವುದು. ಇದರ ಸಂಪಾದಕರು : ಜಯಕುಮಾರ್, ರುಕ್ಕೋಜಿ ಕೆಲವು ಬಾರಿ ಚೂಟಿಯಿಂದ ಬರೆಯುತ್ತಾರೆ.

## ಸಾದರ ಸ್ವೀಕಾರ

**ಗಂಗೆಯ ಶಿಖರಗಳಲ್ಲಿ** (ಪ್ರವಾಸ ಕಥನ) ಜಿ. ಎಸ್. ಶಿವರುದ್ರಪ್ಪ, ಶಾರದಾ ಪ್ರಕಾಶನ, ಅರಳೇಪೇಟೆ, ಬೆಂಗಳೂರು-53. ಬೆಲೆ: 7-50

---

**ಅಗ್ನಿ ಸಾಕ್ಷಿ** (ನಾಟಕ) ಶ್ರೀರಂಗ, ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು-29. ಬೆಲೆ: 10-00

---

**ಹರಿಗೋಲು** (ನೀಳ್ಗವನ) ಎಚ್. ಎಸ್. ವೆಂಕಟೇಶಮೂರ್ತಿ, ಹೋದಿಗೆರೆ ಪ್ರಕಾಶನ ನಂ, 101, ಗಣೇಶ ಮಂದಿರದ ರಸ್ತೆ, ಎರಡನೇ ಬ್ಲಾಕ್, ಟಿ. ಆರ್, ನಗರ, ಬೆಂಗಳೂರು-28. ಬೆಲೆ: 5-00

---

**ನಾಟಕ ರಂಗಕೃತಿ** (ನಾಟಕ ವಿಮರ್ಶೆಯ ಕೆಲವು ವಿಚಾರಗಳು) ಪ್ರಸನ್ನ, ಅಕ್ಷರ ಪ್ರಕಾಶನ, ಸಾಗರ, ಶಿವಮೊಗ್ಗ ಜಿಲ್ಲೆ ಬೆಲೆ: 25-00

---

**ಬ್ರೆಕ್ಟ್** (ವಿಚಾರ) ಜಿ. ರಾಜಶೇಖರ್, ಅಕ್ಷರ ಪ್ರಕಾಶನ, ಶಿವಮೊಗ್ಗ ಜಿಲ್ಲೆ. ಬೆಲೆ: 6-00

---

**ದಿಕ್ಕು ತಪ್ಪಿದ ಕರ್ನಾಟಕ ಭೂಸುಧಾರಣೆ**--ಕ್ಷೀರಸಾಗರ, ಪ್ರಕಾಶಕರು: ಸಿಯೆಡ್ಸ್, 66, ಚಾರ್ಲ್ಸ್ ಕ್ಯಾಂಬೆಲ್ ರೋಡ್, ಕಾಕ್ಸ್‌ಟೌನ್, ಬೆಂಗಳೂರು-85 ಬೆಲೆ: 20-00

---

**ಪ್ರಸ್ಥಾನ** (ಅನುವಾದಿತ ಕತೆಗಳು) ರತ್ನಾಕರ ಶೆಟ್ಟಿ, ಯುಗಪುರುಷ ಪ್ರಕಟಣಾಲಯ ಕಿನ್ನಿಗೋಳಿ-574150 ಬೆಲೆ: 6-00

---

**ಸಕ್ಕರೆ ಬೊಂಬೆ** (ಮಕ್ಕಳ ಪದ್ಯಗಳು) ಟಿ. ಎಸ್. ನಾಗರಾಜಶೆಟ್ಟಿ, ನಿರ್ಮಲ ಪ್ರಕಾಶನ, ಕೆ. ಆರ್. ಬಡಾವಣೆ, ತಿಪಟೂರು-572 202. ಬೆಲೆ: 10-00

---

**ಡಾ|| ಶಂ. ಬಾ, ಪಾ. ನೆಂ. ಕಂಡಂತೆ,** ಮಾನವ ಧರ್ಮ ಪ್ರತಿಷ್ಠಾನ (ರಿ.) ಮಾಳಿಗಲಿ, ರಾಯಬಾಗ, ಬೆಳಗಾವಿ ಜಿಲ್ಲೆ ಬೆಲೆ: 3-00

ರಾಜ್ಯದ ಅಸಹಾಯಕ ಹೆಣ್ಣು ಮಕ್ಕಳ ಕಷ್ಟದಲ್ಲಿ ನೆರವಾಗುತ್ತದೆ ಕರ್ನಾಟಕ ಸರ್ಕಾರ

**ಹೆರಿಗೆ ಭತ್ಯ. ಗರ್ಭಿಣಿಯರಾದ ಕೂಲಿಕಾರ ಮಹಿಳೆಯರಿಗೆ ಪ್ರಸವದ ಸನಿಹದ ದಿನಗಳಲ್ಲಿ ಅತ್ಯಗತ್ಯವಾಗಿ ಬೇಕಾದ ಸಹಾಯವನ್ನು ಇದೀಗ ಹೆರಿಗೆ ಭತ್ಯ ನೀಡುತ್ತದೆ.**

ಮಹಿಳಾ ಕೃಷಿ ಕಾರ್ಮಿಕರು ಈಗ ಹೆರಿಗೆಯ ಮುಂಚಿನ ಹಾಗೂ ಅನಂತರದ ದಿನಗಳಲ್ಲಿ ಶ್ರಮದಾಯಕ ಕೂಲಿ ಕೆಲಸದಿಂದ ವಿರಾಮ ಪಡೆಯಬಹುದು. ಹೆರಿಗೆಯ ಮುಂಚಿನ ಹಾಗೂ ನಂತರದ ದಿನಗಳಲ್ಲಿ ಅವರಿಗೆ ಈ ಯೋಜನೆಯಂತೆ ಹೆರಿಗೆ ಭತ್ಯದ ಸಹಾಯ ದೊರೆಯುತ್ತದೆ.

ಮಾಹೆಯಾನ 100 ರೂ.ಗಳ ಈ ಭತ್ಯವನ್ನು 3 ತಿಂಗಳ ಅವಧಿಗೆ ಪ್ರಸವದ ಸನಿಹದ ದಿನಗಳಲ್ಲಿ ಒಂದೇ ಗಂಟಿನಲ್ಲಿ ನೀಡಲಾಗುತ್ತದೆ. ಈ ಸೌಲಭ್ಯ ಮೊದಲನೆಯ ಹಾಗೂ ಎರಡನೆಯ ಶಿಶುವಿನ ಜನನ ಕಾಲದಲ್ಲಿ ಮಾತ್ರ ದೊರೆಯುವುದು.

ಈ ಸೌಲಭ್ಯವನ್ನು ಪಡೆಯಲು ಬೇಕಾದ ದಾಖಲೆಗಳು-ಗರ್ಭಿಣಿಯು ಭೂಮಿ ಇಲ್ಲದ ಕೃಷಿ ಕಾರ್ಮಿಕರ (ಕೂಲಿಕಾರರ) ಕುಟುಂಬಕ್ಕೆ ಸೇರಿದವರೆಂಬ ಬಗ್ಗೆ ಗ್ರಾಮ ಲೆಕ್ಕಿಗರು ನೀಡುವ ಪ್ರಮಾಣ ಪತ್ರ. ಸರ್ಕಾರಿ ಆಸ್ಪತ್ರೆಯ ಅಥವಾ ಪ್ರಾಥಮಿಕ ಆರೋಗ್ಯ ಕೇಂದ್ರದ ವೈದ್ಯಾಧಿಕಾರಿಗಳು ನೀಡುವ ವೈದ್ಯಕೀಯ ಪ್ರಮಾಣ ಪತ್ರ.

ಹೆಚ್ಚಿನ ಮಾಹಿತಿ ಹಾಗೂ ಅರ್ಜಿ ನಮೂನೆಗಳಿಗಾಗಿ ನಿಮ್ಮ ಹಳ್ಳಿಯ ಗ್ರಾಮ ಸೇವಕರು ಅಥವಾ ನಿಮ್ಮ ತಾಲ್ಲೂಕಿನ ಬ್ಲಾಕ್ ಡೆವಲಪ್‌ಮೆಂಟ್ ಆಫೀಸರನ್ನು ಸಂಪರ್ಕಿಸಿ.

ಕರ್ನಾಟಕ ವಾರ್ತೆ

**ಅಸಹಾಯಕರಿಗೊಂದು ಸಹಾಯದ ಯೋಜನೆ.**

F/NP/UKRN/72 No. M (2) PRB 210/73/74

Shoodra Kannada Monthly



ಫೆಬ್ರವರಿ ಸಂಚಿಕೆಯಲ್ಲಿ :

ಗೌರೀಶ ಕಾಯ್ಕಿಣಿ—ಸ. ರಘುನಾಥ್—ಕೆ. ವಿ. ತಿರುಮಲೇಶ್—ಗಾಯತ್ರಿ ಬಿ. ಎಸ್.—ಜಯರಾಮ್—ರಮಜಾನ್ ದರ್ಗಾ—ಟಿ. ಜಿ. ರಾಘವ—ಶಂಕರ ಕಟಗಿ—ಡಾ॥ ಬಸವರಾಜ ಸಬರದ—ನಾಗರತ್ನಕುಮಾರಿ—ಬಸವಯ್ಯ—ಕ. ವೆಂ. ರಾಜಗೋಪಾಲ್—ವೆಂಕಟೇಶ್ ಮೂರ್ತಿ ಆರ್.—ಬಿ. ಸಿ. ಶೈಲ—ನಿನಾಸಮ್‌ರವರ 'ತಿರುಗಾಟ'ದ ನಾಟಕಗಳು – ಹರಪನಹಳ್ಳಿ ಸಮುದಾಯದ ನಾಟಕಗಳು, ಹಾಗೂ ಡಾ॥ ಎಲ್. ವ. ... ರ್ಯನಾರಾಯಣ.

Printed at : Shalivahan Printers, Bangalore - 53
Editor & Publisher : M. SRINIVAS